# ಸಪ್ತಗಿರಿ

ಬೆಲೆ : ರೂ. ೧




ಆಗಸ್ಟ್ 1987

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ನಿನಗೇಕೊ ಭಕುತರ ಚಿಂತೆ
ಘನ ಮಹಿಮ ಮಹದಾದಿ ಸುರವಂದ್ಯ ತಿಮ್ಮಾ ॥ ಪ ॥

ಸಿರಿದೇವಿ ನಿನರಾಣಿ ಪರಮೇಷ್ಠಿ ನಿನ ಪುತ್ರ
ಕಿರಿಯ ಮಗನು ಜಗತ್ಪ್ರಾಣದೇವ
ಹಿರಿಯ ಸೊಸೆ ವಾಣಿ ಕಿರಿಯ ಭಾರತೀ ದೇವಿ
ಪುರಹರನು ಮೊಮ್ಮಗನು ಸುರರು ಪರಿವಾರ ॥ ೧ ॥

ಸಕಲ ಲೋಕಕ್ಕೆ ಅರಸು ಲಕುಮಿಕಾಂತನು ಎಂದು
ನಿಖಿಳ ವೇದ ಸ್ಮೃತಿಯು ಸಾರುತಿಹುದೊ
ಅಖಿಲ ವ್ಯಾಪಕನಾಗಿ ಸಕಲ ಸುರನರಿಂದ
ಭಕುತಿ ಪೂರ್ವಕ ಓಲಗವ ಕೈಕೊಂಬ ಸಮಯದಲಿ ॥ ೨ ॥

ಸುರನಾಥ ನೀನಲ್ಲದಿತರ ದೇವತೆಯುಂಟೆ
ಸರುವೋತ್ತುಮನೆಂಬನಾವನವನೊ
ಸರಸ ಗುಣನಿಧಿಯೆ ಶ್ರೀಜಗನ್ನಾಥ ವಿಠಲ
ವರಭಾಗ್ಯ ಮಬ್ಬಿನಲಿ ಇರುವೊ ಸಮಯದಲಿ ॥ ೩ ॥

—ಶ್ರೀಗುರು ಜಗನ್ನಾಥದಾಸರು




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಟಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥


ಸಂಪುಟ ೧೮] ಆಗಸ್ಟ್ ೧೯೮೭ [ಸಂಚಿಕೆ ೩


# ವಿಷಯಸೂಚಿ



ಮುಖಚಿತ್ರ : ಶ್ರೀಕೃಷ್ಣ; ಚಿತ್ರ–ಶಶಿ

ಹಿಂಬದಿಯಲ್ಲಿ : ಗಣಪತಿ; ಚಿತ್ರ–ಕೆ. ಜಗದೀಶ್

ಒಳಗಡೆ : 1. ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಶ್ರೀಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು. 2. ತಿ.ತಿ.ದೇ. ಡೈರಿಫಾರಂನಲ್ಲಿ ಹುಲ್ಲು ಬೆಳೆಯುವ ಯಂತ್ರ ಪ್ರಾತ್ಯಕ್ಷಿಕೆಯ ಉದ್ಘಾಟನೆ.

# ಸಂಪಾದಕೀಯ

ಶ್ರೀಕೃಷ್ಣನ ಹೆಸರು ಭಾರತೀಯ ಜನಜೀವನದಲ್ಲಿ ಹಾಸುಹೊಕ್ಕಾಗಿ ಪರಂಪರೆಯಿಂದ ಬಂದಿರುವುದನ್ನು ಬಾಲವೃದ್ಧರೆಲ್ಲ ಬಲ್ಲರು. ಆತ ಮಹಾವಿಷ್ಣುವಿನ ಹತ್ತವತಾರದಲ್ಲಿ ಒಬ್ಬ ಎಂಬುದಷ್ಟೇ ಅಲ್ಲ, ಆತ ಸಾಮಾನ್ಯ ಜನರಿಗೆ, ನಮ್ಮಂತಹ ಭವಪಾಶ ಬದ್ಧರಿಗೆ ಪ್ರಿಯಾತಿ ಪ್ರಿಯವಾದ ವ್ಯಕ್ತಿತ್ವ ಹೊಂದಿದವನೆಂಬುದೂ ಇದಕ್ಕೆ ಕಾರಣ. ಕೃಷ್ಣ ಚರಿತ್ರೆಯಲ್ಲಿ ಆತ ಪರಮಾತ್ಮ ಎಂಬುದಕ್ಕೆ ಬೇಕಾದ ಆಧಾರಗಳು ಇರುವಂತೆಯೇ ಪುರುಷೋತ್ತಮ ಎಂಬುದಕ್ಕೂ ಬೇಕಾದಷ್ಟು ಆಧಾರಗಳಿವೆ. ಆತನನ್ನು ದೇವರೆಂದರೂ, ಮನುಷ್ಯರಲ್ಲಿ ಮಹೋನ್ನತನೆಂದರೂ ಆತನ ಪ್ರಾಮುಖ್ಯತೆಗೆ ಯಾವುದೇ ಕೊರತೆಯೇರ್ಪಡದು ಎಂಬುದು ಬಲ್ಲವರು ಬಹುಜನರ ಅಭಿಪ್ರಾಯ, ನಂಬಿಕೆ.

ಹುಟ್ಟಿದಾಗಿನಿಂದ ಸಮಾಜದಲ್ಲಿನ ಅನ್ಯಾಯ ಪರಂಪರೆಗಳನ್ನು ಎದುರಿಸುತ್ತ, ಮನುಷ್ಯನಾಗಿ ತಾನು ಕಾರಣನಲ್ಲದ ವಿಧ್ವಂಸಕತೆ, ದ್ವೇಷಗಳನ್ನು ಅನುಕ್ಷಣವೂ ಮೆಟ್ಟಿ ನಿಲ್ಲಲು ಪ್ರಯತ್ನಿಸುತ್ತ ಮುಂದುವರೆದ ಒಬ್ಬ ಬಾಲಕನಾಗಿ ಶ್ರೀಕೃಷ್ಣ ಕಂಡು ಬಂದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ, ಧರ್ಮದ ಕಡೆ ಏಕಚಿತ್ತದಿಂದ ಮುನ್ನಡೆಯುವ ಆತನ ಲಕ್ಷ್ಯ ಗಮನಾರ್ಹವಾಗುತ್ತದೆ. ತಾನು ಕಷ್ಟ ಪರಂಪರೆಯಲ್ಲೇ ಇದ್ದರೂ ಸಹೃದಯರಿಗೆ, ಧರ್ಮಭೀರುಗಳಿಗೆ, ನೆರವಾಗಿ, ನೆರಳಾಗಿ, ಧರ್ಮದ ಕಡೆ ಎಲ್ಲರನ್ನೂ ನಡೆಸುವ ಉನ್ನತ ಧ್ಯೇಯದಲ್ಲಿ ನಡೆದ ಆತನ ಬಾಲ್ಯ ಜೀವನ ಉಲ್ಲಾಸಕರವಾದಂತೆಯೇ ಉದ್ಬೋಧಕರವೂ ಆಗಿದೆ.

ಮುಖ್ಯ ಪ್ರಶ್ನೆಯೆಂದರೆ ಅನ್ಯಾಯಕ್ಕೆ ಒಳಗಾಗಿ ಅದನ್ನು ಸರಿಪಡಿಸಿಕೊಂಡು ತಾನು ಸುಖ ಪಡುವುದು ಮಾತ್ರವೇ ಅಲ್ಲ. ಅನ್ಯಾಯಕ್ಕೆ ದೌರ್ಜನ್ಯಕ್ಕೆ ಒಳಗಾಗಿ ಯಾರು ದುಃಖ ಪಡದಂತೆ ನೋಡುವುದು. ಆ ದಿಸೆಯಲ್ಲಿ ಕ್ರಿಯಾಶೀಲನಾಗುವುದು. ಎಂದರೆ ಇಂದಿನ ಪರಿಭಾಷೆಯಲ್ಲಿ ನೊಂದವರ, ದೌರ್ಜನ್ಯಕ್ಕೆ ಒಳಗಾದವರ ಬಗ್ಗೆ ಸಹಾನುಭೂತಿ ಹೊಂದಿರುವುದು. ಶ್ರೀಕೃಷ್ಣಚರಿತ್ರೆ ಇದಕ್ಕೆ ಒಂದು ಮುಖ್ಯ ಉದಾಹರಣೆಯಾಗ ಬಲ್ಲದು. ಶಿಶುಪಾಲ, ದಂತವಕ್ರ, ಕಂಸ ಮೊದಲಾದ ವ್ಯಕ್ತಿಗತ ದ್ವೇಷಿಗಳನ್ನು ತಾನೇ ಪರಿಹರಿಸಿಕೊಂಡರೂ, ಜರಾಸಂಧ, ದುರ್ಯೋಧನ, ಕಾಲಯವನ ಮೊದಲಾದವರ ವಿಷಯದಲ್ಲಿ ಅನ್ಯರನ್ನು ಬಳಸಿ ಆ ಮೂಲಕ ಧರ್ಮವನ್ನು ಕಾಯ್ದ ಕಾರ್ಯಕ್ಷಮತೆ ಮನುಷ್ಯ ಸಹಜವೆಂಬಂತೆ ತೋರಿ ಮತ್ತೂ ಮಹತ್ತ್ವವನ್ನು ಪಡೆಯುತ್ತದೆ. ಆತನ ಮುತ್ಸದ್ದಿತನ ಪ್ರಿಯವಾಗುತ್ತದೆ.

ಪಾಂಡವ ಪ್ರತಿಷ್ಠಾಪನಾಚಾರ್ಯ ಎಂದು ಹೆಸರು ಪಡೆಯಲು ಆತನ ಪಾಂಡವ ಪ್ರೀತಿ ಕಾರಣವಾಗಿರಬಹುದು. ಆದರೆ ಆ ಪ್ರೀತಿಗೆ ಅವರು ತನ್ನ ಹತ್ತಿರದ ಬಂಧುಗಳು ಎಂಬುದಕ್ಕಿಂತ ಅವರು ಧರ್ಮ ಮಾರ್ಗ ಪ್ರವರ್ತಕರು ಎಂಬುದೂ, ಹೆಚ್ಚು ಅನ್ಯಾಯಕ್ಕೆ ಒಳಗಾದವರು ಎಂಬುದೂ, ಸೂಕ್ತ ಕಾರಣಗಳು ಎಂದು ಹೇಳಬಹುದು.

ಶ್ರೀರಾಮ ಕೃಷ್ಣರು ಭಾರತೀಯ ಜೀವನದಲ್ಲಿ ಮನುಷ್ಯನಿಗೆ ಧಾರ್ಮಿಕ ಜೀವನ ನಡೆಸಲು ದೊರೆಯುವ ಎರಡು ಉದಾಹರಣೆಗಳು. ಆದರ್ಶಗಳು. ಅವರಿಬ್ಬರೂ ಅವತಾರ ಪುರುಷರು, ದೈವವೇ ಆಗಿರುವುದರಿಂದ ಅವರ ಹೆಜ್ಜೆಯಲ್ಲಿ ನಡೆಯುವುದು ಮನುಷ್ಯಮಾತ್ರರಾದ ನಮಗೆ ಅಸಾಧ್ಯವೆಂದೂ, ದೂರದಿಂದಲೇ ನಮಸ್ಕಾರ ಹಾಕಿ ನಮ್ಮ ದಾರಿ ನಾವು ನೋಡಿಕೊಳ್ಳುವ ಎಂಬುದೂ ಮನುಷ್ಯ ಸಹಜವಾಗಬಹುದಾದರೂ, ಅದು ಮನುಷ್ಯ ಸಹಜ ದೌರ್ಬಲ್ಯವಾಗಬಹುದೇ ಹೊರತು ಮನುಷ್ಯ ಸಹಜಗುಣ ಆಗಲಾರದು. ಶ್ರೀರಾಮ ಪೂಜ್ಯನಾದರೆ ಶ್ರೀಕೃಷ್ಣ ಪ್ರಿಯನಾಗಿ ನಮ್ಮೊಡನೆ ನಮ್ಮ ಸುಖ, ದುಃಖ, ಒಲವು, ನಲಿವುಗಳಲ್ಲಿ ನಾನೂ ಇದ್ದೇನೆ ಎನ್ನುವ ಜೊತೆಗಾರನಾಗಬಲ್ಲ ವ್ಯಕ್ತಿತ್ವ ಹೊಂದಿರುವುದರಿಂದ ಅವನನ್ನು ಆದರ್ಶವಾಗಿ ಕಾಣುವ ಪ್ರಯತ್ನ ಮಾಡುವುದರಲ್ಲಿ ಲಾಭವಿದೆ ಸಾಮಾಜಿಕವಾಗಿ.

ಕೃಷ್ಣಂ ವಂದೇ ಜಗದ್ಗುರುಂ ”

# ಗಣಪತಿಯ ಪ್ರಾಚೀನತೆ

ನಮ್ಮ ಭರತ ಖಂಡದಲ್ಲಿ ಅಷ್ಟೇ ಏಕೆ; ವಿಶ್ವದ ವಿವಿಧ ದೇಶಗಳಲ್ಲಿ ಪ್ರತಿವರುಷ ಭಾದ್ರಪದ ಶುಕ್ಲ-ಚೌತಿಯ ದಿನ ಸರ್ವರಿಂದಲೂ 'ಗಣಪತಿ'ಯು ಪೂಜಿಸಲ್ಪಡುತ್ತಾನೆ. ಸರ್ವಜನರ ವಿಘ್ನಗಳನ್ನು ದೂರ ಮಾಡುವ ಕಾರಣದಿಂದಾಗಿ ಇವನಿಗೆ "ವಿಘ್ನರಾಜ"ನೆಂದೂ ಹೆಸರು ಬಂದಿದೆ. ನಾವು ಮಾಡುವ ಎಲ್ಲ-ಶುಭ ಕಾರ್ಯಗಳು ನಿರ್ವಿಘ್ನವಾಗಿ ನೆರವೇರಬೇಕಾದರೆ ಕಾರ್ಯಾರಂಭದಲ್ಲಿ ಇವನ ಪೂಜೆ ಅತ್ಯಾವಶ್ಯವಾಗಿದೆ.

ಸ್ಕಂದ ಪುರಾಣ, ಪದ್ಮಪುರಾಣ, ವರಾಹ ಪುರಾಣ, ಮತ್ತು ಲಿಂಗ ಪುರಾಣ ಮುಂತಾದ ಪುರಾಣ ಸಾಹಿತ್ಯದಲ್ಲಿ ಗಣಪತಿಯ ಬಗ್ಗೆ ಅನೇಕ ಕಥೆಗಳು, ವರ್ಣನೆಗಳು ಹೇರಳವಾಗಿ ದೊರೆಯುತ್ತವೆ. ಹಾಗೆಯೇ ವೈದಿಕ ಸಾಹಿತ್ಯದಲ್ಲಿ ಕೂಡ ಗಣಪತಿಯ ವರ್ಣನೆಯು ಪವಿತ್ರವಾಗಿ ಮೂಡಿಬಂದಿರುತ್ತದೆ.

ಮೊದಲನೆಯದಾಗಿ ಋಗ್ವೇದದಲ್ಲಿ ಬರುವ ಒಂದು ವರ್ಣನೆ ಹೀಗಿದೆ-

ಗಣಾನಾಂ ತ್ವಾ ಗಣಪತಿಂ ಹವಾಮಹೇ
ಕವಿಂ ಕವೀನಾಮುಪಮ ಶ್ರವಸ್ತಮಂ
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣ ಸ್ಪತೇ
ಆನಃ ಶೃಣ್ವನ್ನೂತಿಭಿಃ ಸೀದ ಸಾದನಂ

ಗಣನಾಯಕನಾದ ನಿನ್ನನ್ನು, ಕವಿಗಳ ಮಧ್ಯೆ ಅಂತಹ ಗುಣವಿಶಿಷ್ಟನೇ ಆದ ಜ್ಞಾನ ವಾಣಿಗು ಉಪದೇಶಕನಾದ ಅತ್ಯಂತ ಸಮೀಪನಾದ ಬುದ್ಧಿಗಮ್ಯನಾದ ಅತ್ಯಂತ ಯಶಸ್ವಿಯಾಗಿರುವ ನಿನ್ನನ್ನು ಆಹ್ವಾನಿಸುತ್ತೇವೆ. ಪ್ರಕಾಶಮಯರಾಗಿರುವವರಲ್ಲೆಲ್ಲಾ ಅತ್ಯಂತ ಪ್ರಕಾಶಮಾನನೂ ಉದಾರತಮನಾಗಿಯೂ ಆಗಿರುವ ನಿನ್ನನ್ನು ಆಹ್ವಾನಿಸುತ್ತೇವೆ. ವಿರಾಟ್‌ವಿಶ್ವದ ಹಾಗೂ ಬೃಹತೀ ವೇದ ವಾಣಿಯ ಸ್ವಾಮಿಯೇ, ರಕ್ಷಕನೇ, ನಮ್ಮ ಪ್ರಾರ್ಥನೆಯನ್ನು ಆಲಿಸುತ್ತ ನಿನ್ನ ರಕ್ಷಣಾ ಸಾಮರ್ಥ್ಯಗಳೊಂದಿಗೆ ನಮ್ಮ ಹೃದಯ ಮಂದಿರಗಳಲ್ಲಿ ವಿರಾಜಿಸು.

ಇನ್ನು ಯಜುರ್ವೇದದಲ್ಲಿ ಬರುವ ಗಣಪತಿಯ ವರ್ಣನೆ ಹೀಗಿದೆ-

ಗಣಾನಾಂ ತ್ವಾ ಗಣಪತಿಂ ಹವಾಮಹೇ
ಪ್ರಿಯಾಣಾಂ ತ್ವಾಂ ಪ್ರಿಯಪತಿಂ ಹವಾಮಹೇ
ನಿಧೀನಾಂ ತ್ವಾಂ ನಿಧಿಪತಿಂ ಹವಾಮಹೇ ವಸೋಮಮ
ಆಹಮಜಾನಿ ಗರ್ಭದ ಮಾತ್ವಮಜಾಸಿ ಗರ್ಭಧಂ

ಜೀವನಗಣವೆಲ್ಲವರ ಸ್ವಾಮಿಯೂ ಪಾಲಕನೂ ಆದ ಗಣನೀಯನಾದ, ಸಮ್ಮಾನನೀಯನೂ ಆದ ನಿನ್ನನ್ನು ಆಹ್ವಾನಿಸುತ್ತೇವೆ. ಪ್ರಿಯವಾದುದೆಲ್ಲದರ ಪ್ರಿಯನೂ ಒಡೆಯನೂ ಶಿಕ್ಷಕನೂ ಆದ ನಿನ್ನನ್ನು ಆಹ್ವಾನಿಸುತ್ತೇವೆ. ನಿಧಿಗಳೆಲ್ಲದರ ನಿಧಿಯಾಗಿರುವ ಸ್ವಾಮಿಯೂ ಪಾಲಕನೂ ಆದ ನಿನ್ನನ್ನು ಆಹ್ವಾನಿಸುತ್ತೇವೆ. ನನ್ನ ಆಶ್ರಯದಾತೃವೇ ನಾನು ಜಗತ್ತಿಗೆಲ್ಲ ಗರ್ಭರೂಪನಾದನಿನ್ನನ್ನು ನಿರಂತರವಾಗಿ ತಿಳಿದುಕೊಳ್ಳುತ್ತ ಹೋಗುತ್ತಿದ್ದೇವೆ. ನೀನು ಪ್ರಜಾಸಮುತ್ಪಾದನ ಸಮರ್ಥನಾದೆ, ನನ್ನನ್ನು ನನ್ನ ಆಂತರಿಕ-ಕಾಮನೆಗಳನ್ನು ಅರಿತುಕೊಳ್ಳುವವನಾಗು.

ಈಗ ಉಪನಿಷತ್ತುಗಳಲ್ಲಿ ಬರುವ ಶ್ರೀ ಗಣಪತಿಯ ವರ್ಣನೆಯನ್ನು ಅವಲೋಕಿಸೋಣ-

"ಗಣಪತ್ಯುಪನಿಷತ್ತಿನಲ್ಲಿ" ಗಣಪತಿಯ ಆಕಾರ, ಆಯುಧಗಳ ವರ್ಣನೆಯು ಹೀಗಿದೆ-

ಏಕದಂತಂ ಚತುರ್ಹಸ್ತಂ ಪಾಶಮಂಕುಶ ಧಾರಿಣಮ್
ರದಂ ಚ ವರದಂ ಹಸ್ತೈರ್ಬಿಭ್ರಾಣಂ ಮೂಷಿಕಧ್ವಜಮ್
ರಕ್ತಂ ಲಂಬೋದರಂ ಶೂರ್ಪಕರ್ಣಕಂ ರಕ್ತವಾಸಸಮ್

**ಶ್ರೀ ಶ್ರೀನಿವಾಸಮೂರ್ತಿ**

ರಕ್ತಗಂಧಾನುಲಿಪ್ತಾಂಗಂ ರಕ್ತ ಪುಷ್ಪೈಃ ಸುಪೂಜಿತಮ್
ಭಕ್ತಾನುಕಂಪಿನಂ ದೇವಂ ಜಗತ್ಕಾರಣ ಮಚ್ಯುತಮ್

ಗಣಪತಿಗೆ ಬಲಗಡೆಗೆ ಒಂದೇ ಹಲ್ಲು ಇದೆ. ಅವನಿಗೆ ನಾಲ್ಕು ಕೈಗಳು ಇದ್ದು ಅವುಗಳಲ್ಲಿ ಮೇಲಿನ ಬಲಗೈಯಲ್ಲಿ ಪಾಶವೂ, ಎಡಗೈಯಲ್ಲಿ ಅಂಕುಶವೂ ಹಾಗೂ ಕೆಳಗಿನ ಬಲಗೈಯಲ್ಲಿ ವರದ ಮುದ್ರೆಯು, ಎಡಗೈಯಲ್ಲಿ ಆನೆಯ ದಂತವೂ ಇರುತ್ತದೆ. ಇಲಿಯು ಅವನ ವಾಹನವಾಗಿದೆ. ಗಣಪತಿಯು ರಕ್ತಚಂದನವನ್ನು ಮೈಗೆ ಪೂಸಿಕೊಂಡಿರುವನು, ಕೆಂಪು ಹೂವುಗಳಿಂದ ಪೂಜೆ ಗೊಂಡಿರುವನು. ಮತ್ತು ಭಕ್ತರ ಮೇಲೆ ನಿರಂತರ ಕೃಪೆ ಮಾಡುವವನು ನಾಶರಹಿತನು,ಜಗತ್ಕಾರಣನು ಆಗಿರುತ್ತಾನೆ.

ವೇದದಲ್ಲಿ ಬರುವ ಇನ್ನೊಂದು ಮಂತ್ರವು ಹೀಗಿದೆ-

ನಿಷುಸೀದ ಗಣಪತೇ ಗಣೇಷು
ತ್ವಾಮಾಹು ರ್ವಿಪ್ರತಮಂ ಕವೀನಾಂ
ನ ಋತೇ ತ್ವತ್‌ಕ್ರಿಯತೇ ಕಿಂಚನಾರೇ

(8ನೇ ಪುಟ ನೋಡಿ)



# ಪಣಂಬೂರಿನ ಗಣಪತಿ

ಕರ್ನಾಟಕದ ಪಡುಕರಾವಳಿಯಲ್ಲಿ ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳು ಕಳೆದ ಶತಕದಲ್ಲಿ ಮದ್ರಾಸ್ ರಾಜ್ಯಕ್ಕೆ ಸೇರಿದ್ದು (ಆ ಮೊದಲು ಉತ್ತರ ಕನ್ನಡ ಜಿಲ್ಲೆ ಮುಂಬಯಿ ರಾಜ್ಯಕ್ಕೆ ಸೇರಿಸಲ್ಪಟ್ಟಿತ್ತು) 1956 ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾಗುವಾಗ ಇವೆರಡು ಕನ್ನಡ ಪ್ರದೇಶ-ಪ್ರಾಂತ್ಯಕ್ಕೆ ಒಳಪಟ್ಟುವು.

ದಕ್ಷಿಣ ಕನ್ನಡ ಜಿಲ್ಲೆಯ ಕೇಂದ್ರ ನಗರ ಮಂಗಳೂರು, ಈಗ ಇಲ್ಲಿನ ವಿಮಾನ ನಿಲ್ದಾಣ, ಸರ್ವಋತು ಬಂದರ, ಪತ್ರ್ದೇಶಿಕ ತಾಂತ್ರಿಕ ಕಾಲೇಜಿ ಇತ್ಯಾದಿಗಳಿಂದಾಗಿ ಇಲ್ಲಿ ದೇಶ ವಿದೇಶಗಳವರ ಸಂಪರ್ಕ ಹೆಚ್ಚಿದೆ.

ಪ್ರಾಚೀನ ಕಾಲದಲ್ಲಿ (ಕ್ರಿ. ಶ 2 ಶತಕದಲ್ಲಿ) ಮಂಗಳೂರ ನೆರೆಯೂರಾದ ಪಣಂಬೂರು ಬಂದರ (ಹಡಗು ನಿಲ್ದಾಣ) ಆಗಿತ್ತು. ಇಲ್ಲಿಗೆ ವ್ಯಾಪಾರಕ್ಕಾಗಿ ಸಾಮಾನುಗಳನ್ನು ಸಾಗಿಸುತ್ತಿರುವ ಗ್ರೀಕ್ ದೇಶದ ಹಡಗು ಬಂದಿತ್ತು. ಅವರೊಂದಿನ ಒರ್ವ ಹೆಂಗಸು ಇಲ್ಲಿನ ಜನರಿಂದ ವಶೀಕೃತಳಾದಳು. ಮತ್ತೆ ಗ್ರೀಕರು ಇಲ್ಲಿಗೆ ಬಂದು, ಇಲ್ಲಿಯವರು ಮಧುಪಾನದಿಂದ ಮತ್ತರಾಗುವಂತೆ ಮಾಡಿ ಆಕೆಯನ್ನು ಕರೆದೊಯ್ದರೆಂದು, ಗ್ರೀಕ್ ದೇಶದಲ್ಲಿ ದೊರಕಿದ ಪ್ರಹಸನದಲ್ಲಿ ತುಳು ಭಾಷೆಯಲ್ಲಿ ಅಡಕವಾಗಿದೆಯೆಂದು ಬೆಂಗಳೂರು ಶ್ರೀ ಪಿ. ಎಸ್. ರೈಯವರು ಬರೆಯುತ್ತಾರೆ. (ಈ ನಾಟಕದ ಈ ಪ್ರಸಂಗದ ಒಕ್ಕಣೆ ಕನ್ನಡವೆನ್ನುವುದಕ್ಕಿಂತಲೂ ತುಳು ಭಾಷೆಯದೆನ್ನುವುದೆ ಸರಿಯಾಗಬಹುದೆಂದು ತಿ. ನಂ. ಶ್ರೀ. ಅವರೂ ಬರೆದಿದ್ದಾರೆ.)

ತುಳುನಾಡು ಕ್ರಿ. ಪೂ. 3ನೆ ಶತಕದ ಅಶೋಕ ಮಹಾರಾಜನು ಬರೆಸಿದ ಲಘು ಶಿಲಾಲೇಖಗಳಲ್ಲಿ, ಆತನ ಆಳಿಕೆಯ ರಾಜ್ಯಕ್ಕಿಂತ ಹೊರಗಿನ (ಪ್ರತ್ಯಂತ) ನಾಲ್ಕು ದೇಶಗಳ ಹೆಸರುಗಳಿವೆ. ಚೋಳ, ಪಾಂಡ್ಯ, ಸತಿಯಪುತ್ರ, ಕೇರಳ ಪುತ್ರಗಳು. ಇಲ್ಲಿನ 'ಸತಿಯಪುತ್ರ' ವೆಂದರೆ "ಕೇರಳದ ಹತ್ತಿರ-ಬಡಗಲ-ತುಳುನಾಡು ಆಗಿರಬಹುದೆಂದು" ಎಂ. ಗೋವಿಂದ ಪೈಯವರು ಹೇಳಿದ್ದಾರೆ (ಆ ಪದವು 'ಶಾಂತಿಕ'ವೆಂಬುದರ ರೂಪಾಂತರವೆಂದು ಅವರೆಂದುದು ಸರಿಯಾಗಿಲ್ಲ.)

ವ್ಯಾಸ ಭಾರತದಲ್ಲಿ 'ಸತಿಯ' ವೆಂಬುದರ ಸಾಮ್ಯಪದಗಳಿವೆ. ಪಾಂಡವರ ರಾಜಸೂಯ ಯಾಗಕ್ಕೆ ಬಂದ ಹಲವಾರು ದೇಶದವರ ಹೆಸರುಗಳನ್ನು ದುರ್ಯೋಧನನು ತಂದೆಗೆ ಹೇಳುವಲ್ಲಿರುವುದು (ಸಭಾ. 78-98 ಕುಂಭಕೋಣ ಪ್ರತಿ)

ಕರ್ಣಾಟಕಾಃ ಕಾಂಸ್ಯ ಕುಟ್ಟಾಃ  
ಪದ್ಮಜಾಲಾಃ ಸತೀ ನರಾಃ  
ದಾಕ್ಷಿಣಾತ್ಯಾಃ ಪುಲಿಂದಾಶ್ಚ  
ಕವೇರಾಸ್ತಂಕಣಾಃ ಖಷಾಃ

ಭೀಷ್ಮ ಪರ್ವದಲ್ಲಿ ಹಲವಾರು ದೇಶಗಳ ಹೆಸರುಗಳಲ್ಲಿ 'ಸತಿಯಾ' ಎಂದಿದೆ. (ಪುಣೆಯ ಪ್ರತಿ 10-62, ಕಲ್ಕತ್ತಾ ಪ್ರತಿ 9-64) 'ಸತಿಯರೇ, ಪ್ರಧಾನ ನರರಾಗಿರುವವರು-ಸತೀ ಪ್ರಧಾನ ಕೌಟುಂಬಿಕ ಪದ್ಧತಿಯುಳ್ಳ ಜನರು-ಇರುವ ಪ್ರದೇಶ ತುಳುನಾಡು. ತುಳುವರು (ಬಂಟ, ಮೊಗೈಲಿ, ಮೂಲ್ಯ, ಮೊಗವೀರ, ಬಿಲ್ಲವ, ಮಡಿವಾಳ ಇತ್ಯಾದಿ) ಈಗಲೂ ಅಳಿಯ ಸಂತಾನ (ಹೆಮ್ಮಕ್ಕಳ ಕಟ್ಟು) ಆಚರಿಸುವರು. ಆ ಕಾರಣ. ಸತಿಯಾಃ ಸತೀ ನರಾಃ-ಈ ಎಂದು ಇಬ್ಬಗೆಯಾಗಿ ಇವರನ್ನು ವ್ಯಾಸ ಭಾರತದಲ್ಲಿ ಹೇಳಿರುವುದು: ಅಶೋಕನ ಶಾಸನದಲ್ಲಿಯೂ ಇವಲ್ಲಿ ಒಂದು ಹೆಸರು ಹೇಳಿದೆಯೆನ್ನ ಬರುತ್ತದೆ.

ದ. ಕ. ಜಿಲ್ಲೆಯ ಪಯಸ್ವಿನಿ ನದಿಯಿಂದ, ಸೀತಾನದಿ (ಬಾರಕೂರು) ವರೆಗೆ 'ತುಳುವ ನಾಡು' ಎನ್ನಲಾಗಿದೆ. ಪರಶುರಾಮ  
ಸೃಷ್ಟಿಸಿದ ಈ ಕರಾವಳಿಯಲ್ಲಿ ಕೇರಳ, ತು  
ಮತ್ತು ಕನ್ನಡಗಳು ಸೇರಿವೆ. ತುಳುನಾ  
ದೇವಾಲಯಗಳಿಗಿಂತ ಹೆಚ್ಚು ಭೂತಾಲ  
ಗಳಿವೆ. ಪಣಂಬೂರಲ್ಲಿಯೂ ಗ್ರೀಕ್ ನಾ  
ದಲ್ಲಿ ಹೇಳಿದ ಮಾರಿಯಮ್ಮನ ಕಟ್ಟೆಯಿತ  
ಇಂತ ಪ್ರಾಚೀನಕಾಲದ ಬಂದರವಿದ್ದ  
ದಲ್ಲಿ ಈಗ ಸರ್ವ ಋತು ಬಂದರ ಸರಕ  
ದಿಂದ ನಿರ್ಮಿತವಾಗಿದೆ. ಇದೊಂ  
ವಿಶೇಷ-ವಿಚಿತ್ರ ಯೋಗಾಯೋಗ.

**ವಿದ್ವಾನ್ ಕೆ. ವೆಂಕಟರಾಯಾಚಾರ್ಯ**

ಪಣಂಬೂರ ಗಣೇಶಮೂರ್ತಿ:- ಪಣಂ  
ರಲ್ಲಿ ನಂದಿಕೇಶ್ವರ ದೇವಾಲಯವಿದೆ. ಅಲ್ಲಿ  
ಗಣಪತಿಗೆ ದತ್ತಿಪಟ್ಟ (ಇ 1305 ರ) ಶಾ  
ವಿದೆ. (ಈ ಶಾಸನ ಅಪ್ರಕಟಿತವಾದ  
ಇವರ ಕರಡುಪ್ರತಿಯನ್ನು ಇಲಾಖೆ  
ಅಧಿಕಾರಿಗಳು ನನಗೆ ಕಳುಹಿಸಿ ಉಪ  
ಸಿದ್ದಾರೆ.)

"ಸ್ವಸ್ತಿಶ್ರೀಮತು ಪಾಂಡ್ಯ ಚಕ್ರವ  
ರಾಯ (ಗಜಾಂಕುಶ) ವೀರ ಬಂಕಿ ದೇ  
ಶ್ವೇಂದ್ರ ದೇವರಸರು ವಿಜಯರಾಜ್ಯ  
ಯ್ಯುತ್ತಮಿರೆ ಶಕನೃಪಕಾಲಾತೀತ ಸಂ  
ತ್ಸರದ 1227 ನೆಯ ವಿಶ್ವಾವಸು ಸಂವತ್ಸರ  
ಮಿಥುನ ಮಾಸ ಪ್ರಥಮನೆಯಲು ಸ್ವ  
ಸಮಸ್ತ ಪ್ರಶಸ್ತಿ ಸಹಿತಂ ದುರ್ವಾ  
ಮುನೀಂದ್ರವಂಶ ಸಂಜಾತರಪ್ಪ ಶ್ರೀಮ  
ನಾಗಶಿವಶೈವಾಚಾರ್ಯಂಗೆ ಸಮರ್ಪಣವಾ  
ನಗರೇಶ್ವರದ ಗಣಪತಿ ದೇವರಿಗೆ ನಿವೇ  
ಕ್ಕೆಂದು ಯಿರಣ ಹೆಗ್ಗಡೆಯ ಬಳಿಯ  
ಲಿಮುಬೆಲೆಯುರುಂ''

ಈ ಶಾಸನದಲ್ಲಿರುವಂತೆ ನಾಗಶಿವಶೈವ  
ಚಾರ್ಯರ ಮತ್ತು ನಗರೇಶ್ವರದ ದೇವ  
ಗಣಪತಿಗೆ ಕುಂದಾಪುರ ತಾಲೂಕಿನ ಬಸರೂ  
ರಿನಲ್ಲಿಯೂ ದತ್ತಿ ಇದೆ.

ಪಣಂಬೂರ ಗಣಪತಿಯ ಮೂರ್ತಿ  
(ಬಸರೂರಿನ ಗಣಪತಿಯ  
ಮೂರ್ತಿಯೂ) ಆನೆಯ ಮೇಲೇರಿದ್ದಾ  
(ಡಾ|| ಪಿ. ಗುರುರಾಜ ಭಟ್ಟರ ಆಂಗ್ಲ  
ಪುಸ್ತಕ ನೋಡಿ) ಮಹಾರಾಷ್ಟ್ರದ ಪುಣೆಯ

(8ನೇ ಪುಟ ನೋಡಿ

# ವಿದೇಶಗಳಲ್ಲಿ ಗಣಪತಿ

ಗಣೇಶ, ವಿಘ್ನರಾಜ, ವಿನಾಯಕ, ಹೇರಂಬ, ಲಂಬೋದರ, ಗಜಾನನ ಮೊದಲಾದ ಅನೇಕ ಹೆಸರುಗಳಿಂದ ಪೂಜೆಗೊಳ್ಳುತ್ತಿರುವ ಗಣಪತಿ ನೋಡಲು ವಿಚಿತ್ರ ಆಕಾರದಲ್ಲಿದ್ದರೂ, ಶಿಲ್ಪಶಾಸ್ತ್ರದ ದೃಷ್ಟಿಯಿಂದಲೂ, ಇತರ ದೇಶಗಳಲ್ಲಿ ವ್ಯಾಪಿಸಿರುವುದರಿಂದಲೂ ಗಣಪತಿ ಪ್ರಮುಖ ಸ್ಥಾನ ಪಡೆದಿದ್ದಾನೆ.

ಒಂದೇ ದೇವತೆಯನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವುದು, ಆಯುಧ, ಲಾಂಛನ, ಆಭರಣಗಳ ಬದಲಾವಣೆಯಿಂದ ಅದಕ್ಕೆ ಪ್ರತ್ಯೇಕ ಶಕ್ತಿಸಾಮರ್ಥ್ಯಗಳನ್ನು ಕಲ್ಪಿಸುವುದು ಹಿಂದೂ ದೇವತಾಶಾಸ್ತ್ರದ ಒಂದು ವಿಶೇಷ. ಎಲ್ಲ ದೇವತೆಗಳಲ್ಲೂ ಹಲವು ಪ್ರಭೇದಗಳುಂಟು. ಗಣಪತಿಯೂ ಇದಕ್ಕೆ ಹೊರತಲ್ಲ. ವಾಸ್ತವವಾಗಿ ಗಣಪತಿಯಲ್ಲಿ ಎಷ್ಟು ಪ್ರಭೇದಗಳಿವೆ ಎಂಬುದು ಇಲ್ಲಿಯವರೆಗೆ ಖಚಿತವಾಗಿ ತಿಳಿದುಬಂದಿಲ್ಲ.

ಸ್ಮೃತಿಯುಗದಲ್ಲಿ ಕೇವಲ ಕ್ರೂರ ದೇವತೆ ಎಂದು ಭಾವಿಸಲಾದ ಗಣಪತಿಯ ರೂಪ ವಿಕಾರವಾಗಿತ್ತು. ಪುರಾಣಕಾಲದಲ್ಲಿ ಉರುಟಾದ ಕಲ್ಲುಗಳಿಗೆ ಗಣಪತಿಯೆಂದು ಹೆಸರಿಟ್ಟು ಪೂಜಿಸುತ್ತಿದ್ದರು. ಗಣಪತಿಯ ಆರಾಧನೆಯನ್ನು ಉಲ್ಲೇಖಿಸುವ ಕ್ರಿ.ಶ. 862 ರ ಶಿಲಾಶಾಸನ ಒಂದು ಜೋಧಪುರದ ಬಳಿ ಇರುವ ಪಾಟಿಯಾಲದಲ್ಲಿ ದೊರೆತಿದೆ. ಆ ಕಾಲದಲ್ಲಿ ಗಜಮುಖ ಗಣಪತಿ ವಿಗ್ರಹಗಳು ಇದ್ದವು ಎಂಬುದಕ್ಕೆ ಇದು ಖಚಿತ ದಾಖಲೆ. ಈ ಶಾಸನದ ಕಾಲಕ್ಕೂ ಹಿಂದೆ ಗಣಪತಿ ವಿಗ್ರಹಗಳು ಭಾರತದಲ್ಲಿ ಇದ್ದವೆಂಬುದಕ್ಕೆ ಶಿಲ್ಪಗಳಲ್ಲಿ, ಗುಹೆಗಳಲ್ಲಿ ಕಡೆದಿರುವ ಭಿತ್ತಿ ಚಿತ್ರಗಳಲ್ಲಿ ಆಧಾರಗಳುಂಟು. ಗಣಪತಿಯ ವಿಗ್ರಹ ಕುರಿತ ಸ್ಪಷ್ಟ ವಿವರಣೆ ಕ್ರಿ.ಶ. ಆರನೇ ಶತಮಾನದ ವರಾಹಮಿಹಿರನ ಬೃಹತ್ ಸಂಹಿತೆಯಲ್ಲಿ ಬರುತ್ತದೆ.

ಗಣಪತಿಯಲ್ಲಿ ಸೌಮ್ಯಗಣಪತಿ, ಹಾಸ್ಯಗಣಪತಿ, ಬಾಲಗಣಪತಿ, ಹೇರಂಬಗಣಪತಿ, ಶಕ್ತಿಗಣಪತಿ, ವಾತಾಪಿ ಗಣಪತಿ, ವರದ ಗಣಪತಿ, ಪ್ರಸನ್ನಗಣಪತಿ ಇವೇ ಮುಂತಾದ ಪ್ರಭೇದಗಳಿವೆ. ಶಿಲ್ಪ-ಆಗಮ ಶಾಸ್ತ್ರದಲ್ಲಿ ಪ್ರಸ್ತಾಪವಿಲ್ಲದ ಅನೇಕ ಪ್ರಭೇದಗಳೂ ಇವೆ ಅಂಥ ಪ್ರಭೇದಗಳಲ್ಲಿ ಎರಡು ಕೈಗಳ ಗಣಪತಿ ಮುಖ್ಯವಾದುದು. ಕನ್ನಡನಾಡಿನ ಸುಪ್ರಸಿದ್ಧ ಯಾತ್ರಾಸ್ಥಳವಾದ ಗೋಕರ್ಣದಲ್ಲಿರುವ ಹಾಗೂ ಇಡಗುಂಜಿಯಲ್ಲಿರುವ ಗಣೇಶನಿಗಿರುವುದು ಎರಡೇ ಕೈಗಳು. ತಮಿಳುನಾಡಿನ ಪಿಳ್ಳೆಯಾರ್ ಪಟ್ಟಿಯಲ್ಲಿಯೂ ದ್ವಿಭುಜ ಗಣಪತಿ ವಿಗ್ರಹವಿದೆ.

ಭಾರತದ ಎಲ್ಲ ಕಡೆಗಳಲ್ಲೂ ಗಣಪತಿಯ ಅನೇಕ ತರಹದ ವಿಗ್ರಹಗಳು ಕಂಡುಬಂದರೂ ಕೆಲವು ಕಡೆಯಲ್ಲಿ ಅಪೂರ್ವವಾದ ಗಣಪತಿ ವಿಗ್ರಹಗಳಿವೆ. ಚೋಳಶಿಲ್ಪದ ಮಾದರಿಯಲ್ಲಿ ನಿರ್ಮಿತವಾಗಿರುವ ವಲಂಪುರಿ ಬಾಲಗಣಪತಿ ಅಪೂರ್ವ ಕಲಾಕೃತಿ. ನಾಲ್ಕು ಕೈಗಳ ಗಜಮುಖನಾದ ಈ ಬಾಲಕ ನಗ್ನನಾಗಿ ನಿಂತಿದ್ದಾನೆ. ಜಟೆಯ ಮೇಲೆ ಜಟೆ; ಕೈಯಲ್ಲಿ ಬೆಣ್ಣೆಯುಂಡೆ ಇದೆ. ಶ್ರೀಶೈಲದ ಮಲ್ಲಿಕಾರ್ಜುನ ದೇಗುಲದ ಗೋಡೆಯೊಂದರ ಮೇಲೆ ಕೊಳಲೂದುವ ಗಣಪತಿಯ ಉಬ್ಬುಶಿಲ್ಪ ಒಂದಿದೆ. ಗಣಪತಿ ಸಂಗೀತಪ್ರಿಯನೆಂದು ಪ್ರತಿನಿಧಿಸುವ ಈ ಕೃತಿ ಅಪೂರ್ವವಾದುದು ಆನೆಮೊಗದ ಕೆಲ ಸ್ತ್ರೀ ವಿಗ್ರಹಗಳು ಅಲ್ಲಲ್ಲಿ ಕಂಡುಬಂದಿದ್ದು ಅವುಗಳನ್ನು 'ಗಣೇಶಾನಿ' ಎಂದು ಕರೆಯಲಾಗಿದೆ. ಕನ್ಯಾಕುಮಾರಿಗೆ ಸಮೀಪದ ಸುಚೀಂದ್ರಂನ ಚಂಪಕರಾಮ ಮಂಟಪದ ಸ್ತಂಭದ ಮೇಲೆ ಅಪೂರ್ವವಾದ ಗಣೇಶಾನಿ ಮೂರ್ತಿ ಇದೆ. ಮಧುರೆಯ ಸುಂದರೇಶ್ವರ ದೇವಾಲಯದ ಬಾಗಿಲ ಬಳಿ ಗಣೇಶಾನಿಯ ಒಂದು ಶಿಲ್ಪಕೃತಿ ಇದ್ದು ಅದಕ್ಕೆ ಆನೆಯತಲೆ, ಎರಡು ಕೈಗಳುಳ್ಳ ಸ್ತ್ರೀದೇಹ, ಸೊಂಟದಿಂದ ಕೆಳಕ್ಕೆ ಹುಲಿಯ ಕಾಲುಗಳು, ಬಾಲ. ಈ ಮೂರ್ತಿಯನ್ನು 'ವ್ಯಾಘ್ರಪಾದ ಗಣೇಶಾನಿ' ಎಂದು ಕರೆಯಲಾಗಿದೆ. ಒಂದು ಕೈಯಲ್ಲಿ ಕಮಲವನ್ನು ಹಿಡಿದು ನಿಂತಿರುವ ಈ ಕೃತಿ ಅಪೂರ್ವವಾದುದು.

ಅಫಘಾನಿಸ್ತಾನದಲ್ಲಿ :– ಕ್ರಿ. ಪೂ. 3-4ನೇ ಶತಮಾನಗಳದ್ದು ಎನ್ನಬಹುದಾದ ಗಣಪತಿಯ ವಿಗ್ರಹವೊಂದು ಅಫಘಾನಿಸ್ತಾನದ ಗಾರ್ಡೇಜನಲ್ಲಿ ಕೆಲವು ವರ್ಷಗಳ ಹಿಂದೆ ದೊರೆತಿದೆ. ಈ ಗಣಪತಿ ಧರಿಸಿರುವ ನಾಗಬಂಧ, ಯಜ್ಞೋಪವೀತ ಮೊದಲಾದವು ಮಗಧ ಶೈಲಿಯಿಂದ ಕೂಡಿವೆ. ಕಾಬೂಲಿಗೆ ಹತ್ತು ಮೈಲು ದೂರದಲ್ಲಿರುವ ಶಕರಧಾರ ಎಂಬಲ್ಲಿ ದೊರೆತ ಗಣಪತಿ ತುಂಬ ಸುಂದರವಾಗಿದೆ. ನಿಂತಿರುವ ಗಣಪತಿಯ ಎಡಬಲಗಳಲ್ಲಿ ಇಬ್ಬರು ಗಣರಿದ್ದಾರೆ. ವಿಶಿಷ್ಟವಾದ ಅಂತರೀಯವನ್ನು ಉಟ್ಟಿದ್ದಾನೆ. ನಾಗಯಜ್ಞೋಪವೀತವಿದೆ.

ನೇಪಾಳದಲ್ಲಿ:– ಹಿಂದುಗಳಂತೆ ಬೌದ್ಧರಿಗೂ ಗಣಪತಿ ಪ್ರಿಯವಾದ ದೇವತೆ. ನೇಪಾಳದಲ್ಲಿ ಗಣಪತಿಯ ವಿಗ್ರಹಗಳು ತುಂಬ ವೈವಿಧ್ಯಮಯವಾಗಿವೆ. ಇಲ್ಲಿಯ ಅತ್ಯಂತ ಜನಪ್ರಿಯವಾದ ಗಣಪತಿಯ ರೂಪವೆಂದರೆ ಹೇರಂಬ ಗಣಪತಿ' ಪಂಚಮುಖ, ದಶಭುಜಗಳ ಈ ಗಣೇಶನ ತೊಡೆಯಲ್ಲಿ ಪತ್ನಿ ಶಕ್ತಿ ಕುಳಿತಿದ್ದಾಳೆ.

ಇಲ್ಲಿಯ ನೃತ್ಯ ಗಣಪತಿ ವಿಗ್ರಹವು ಮೂರು ಕಣ್ಣುಗಳನ್ನು ಹೊಂದಿದ್ದು ಇಲಿಯ ಮೇಲೆ ನಿಂತಿದ್ದಾನೆ. ಇಲಿಯ ಬಾಯಲ್ಲಿ ಬೆಂತಾ– ಇರುತ್ತದೆ. ವಿಗ್ರಹಕ್ಕೆ 12 ಕೈಗಳಿದ್ದು ತಂತ್ರ ಸಂಬಂಧವಾದ ಲಾಂಛನಗಳಿವೆ.

ಟಿಬೇಟಿನಲ್ಲಿ :– ಹಿಂದೂ ದೇವಾಲಯದ ಮಹಾದ್ವಾರದಲ್ಲಿ ಗಣಪತಿಯನ್ನು ಇಡುವಂತೆ ಇಲ್ಲಿಯ ದೇವಾಲಯಗಳ ಮಹಾದ್ವಾರಗಳಲ್ಲಿ ಗಣಪತಿ ವಿಗ್ರಹಗಳಿವೆ. ಅತ್ಯಂತ ಅಪರೂಪದ ಗಣೇಶಾನಿ ವಿಗ್ರಹವೂ ಇಲ್ಲಿ ಕಂಡುಬರುವುದು. ಮಹಾಕಾಳರೇ ಮೊದಲಾದ ಬೌದ್ಧ ದೇವತೆಗಳು ಗಣೇಶ, ಗಣೇಶಾನಿಯರನ್ನು ತುಳಿಯುತ್ತಿರುವಂತೆ ಚಿತ್ರಿಸಿದ್ದಾರೆ. ಇಲ್ಲಿ ಹಿಂದೆ ಗಣೇಶನನ್ನು ವಿಘ್ನಕಾರಕನೆಂದು ಭಾವಿಸಿದ್ದಿರಬೇಕು.

**ಶ್ರೀಮತಿ ಸುಮಿತ್ರಾ ಶಾನಭಾಗ**



ಪೋಟಾನ್‌ನಲ್ಲಿ:– ಇಲ್ಲಿಯ ಎಂಡೇರ ಸ್ತೂಪದಲ್ಲಿ ಗಣೇಶ ವಿಗ್ರಹವಿದೆ. ಪದ್ಮಾಸನದಲ್ಲಿ ಕುಳಿತಿದ್ದಾನೆ. ಬಿಗಿಯಾದ ಪೈಜಾಮ ಧರಿಸಿದ್ದಾನೆ. ಕೆಂಪು ರೇಷ್ಮೆ ಬಟ್ಟೆಯಿಂದ ತಯಾರಿಸಿದ ಪರಾಯಿ ತೊಟ್ಟಿದ್ದಾನೆ. ಪೋಟಾನಿಗೆ 75 ಮೈಲು ದೂರದಲ್ಲಿರುವ ಖಾಕ್ಲಿಕ್ ಎಂಬಲ್ಲಿ ಸುಖಾಸನದ ಮೇಲೆ ಕುಳಿತು ಕಿರೀಟಾದಿ ಆಭರಣಗಳಿಂದ ಅಲಂಕೃತನಾಗಿ ಪ್ರಭಾವಲಯ ಹೊಂದಿರುವ ಗಣಪತಿಯ ಚಿತ್ರ ಒಂದುಂಟು.

ಬೆಜಾಕಲಿಕ್ ದೇವಾಲಯದ ಶಿಲಾಗವಿಗಳಲ್ಲಿ ಗಣಪತಿಯ ಅನೇಕ ವಾಸ್ತುಚಿತ್ರಗಳು ಕಂಡು ಬಂದಿವೆ. ಈ ಗಣಪತಿಗಳ ಮುಖ ಆನೆಯ ಮುಖಕ್ಕಿಂತ ಕಾಡುಹಂದಿಯ ಮುಖವನ್ನು ಹೋಲುವುದು. ಇವುಗಳಲ್ಲಿ ಬಹುತೇಕ ಗಣಪತಿಗಳು ಕುಳಿತಿರುವ ಭಂಗಿಯಲ್ಲಿದ್ದು ಆರು ಕೈಗಳನ್ನು ಹೊಂದಿವೆ. ಈ ಕೈಗಳಲ್ಲಿ ಸೂರ್ಯ–ಚಂದ್ರರನ್ನು ಹಿಡಿದಿರುವುದು ಒಂದು ವೈಶಿಷ್ಟ್ಯ.

ಸಿಂಹಳದಲ್ಲಿ:– ಇಲ್ಲಿಯ ಕಂಟಕ ಚೆಟ್ರಿಂಗ ಸ್ತೂಪದಲ್ಲಿ ಕಡೆದಿರುವ ಗಣಗಳ ನಡುವೆ ಗಣಪತಿ ವಿಗ್ರಹವನ್ನು ಕಾಣಬಹುದು. ಪೊಲೊನ್ನರುವ ಬಳಿ ಇರುವ ಶಿವಾಲಯದ ಸ್ತಂಭದ ಮೇಲೆ ಗಣಪತಿಯ ಸುಂದರ ಕೆತ್ತನೆಯೊಂದಿದೆ. ಕೀರ್ತಿಮುಖ ಕಿರೀಟವಿರುವ ಈ ಗಣಪತಿಗೆ ನಾಲ್ಕು ಕೈಗಳು. ಕುಳಿತಿರುವ ಈ ಗಣೇಶ ಚತುರ್ಭುಜ. ಎಡದ ಕೆಳಹಸ್ತದಲ್ಲಿ ಮೋದಕವಿದೆ.

ಕೋಲಂಬೋಗೆ 150 ಮೈಲು ದೂರದಲ್ಲಿರುವ ಕಟರಗಮದ ಸುಬ್ರಮಣ್ಯ ದೇವಾಲಯದಲ್ಲಿ ಗಣಪತಿಯ ಪ್ರತ್ಯೇಕ ಸುಂದರ ವಿಗ್ರಹವಿದೆ. ಇದನ್ನು ಹಿಂದುಗಳಲ್ಲದೇ ಇತರರೂ ಸಹ ಪೂಜಿಸುವರು.

ಬರ್ಮಾದಲ್ಲಿ:– ಬರ್ಮಾದಲ್ಲಿ ದೊರೆತಿರುವ ವಿಗ್ರಹಗಳೆಲ್ಲ ಸಾಧಾರಣಗಾತ್ರದ ಅಷ್ಟೇನು ಸುಂದರವಲ್ಲದ ಒರಟು ಕೃತಿಗಳು. ಆರು ಕೈಗಳಿದ್ದು ಪದ್ಮಾಸನದಲ್ಲಿ ಕುಳಿತಿರುವ ಗಣಪತಿಯ ವಿಗ್ರಹವೊಂದು ರಂಗೂನಿನ ಮ್ಯೂಸಿಯಂನಲ್ಲಿದೆ. ಕೈಗಳಲ್ಲಿ ಹಿಡಿದಿರುವ ವಸ್ತುಗಳು ಗುರುತಿಸಲಾಗದಷ್ಟು, ಶಿಥಿಲವಾಗಿದೆ. ಚಕ್ರ, ಪಾಶ, ಬಿಲ್ವಪತ್ರೆ ಕಾಯಿಗಳಿರುವುದನ್ನು ಗುರುತಿಸಬಹುದು.

ಇದೇ ರೀತಿಯಲ್ಲಿ ನಾಲ್ಕು ಕೈಗಳಿರುವ ಹಾಗೂ ಪದ್ಮಾಸನದಲ್ಲಿ ಕುಳಿತಿರುವ ಗಣಪತಿಯ ವಿಗ್ರಹವೊಂದು ಪಗನ್‌ನಲ್ಲಿರುವ ದೇವಾಲಯಗಳಲ್ಲೊಂದರ ಅವಶೇಷಗಳಲ್ಲಿ ದೊರಕಿದೆ. ವಿಗ್ರಹ ಪೀಠದ ಮುಂದೆ ಮೊಸಳೆ, ಮೀನು, ಆಮೆಗಳ ಚಿತ್ರಗಳನ್ನು ಕೆತ್ತಲಾಗಿದೆ. ಜಲಚರಗಳೊಡನೆ ಗಣಪತಿ ಇರುವ ಉದಾಹರಣೆ ಇದೊಂದೇ ಎಂದು ಹೇಳಲಾಗುತ್ತದೆ.

ಕಾಂಬೋಡಿಯಾದಲ್ಲಿ:– ನಾಲ್ಕು ತಲೆಗಳುಳ್ಳ ಅಪೂರ್ವ ಗಣಪತಿಯ ವಿಗ್ರಹವೊಂದು ಇಲ್ಲಿಯ ಸ್ಟೇಕಥ್ಮಾರ ಕೆಂಡಲ್ ಎಂಬಲ್ಲಿರುವ ಖಾಸಗಿ ವಿಗ್ರಹ ಸಂಗ್ರಹದಲ್ಲಿದೆ. ಪದ್ಮಾಸನದಲ್ಲಿ ಕುಳಿತಿರುವ ಈ ಗಣಪತಿಗೆ ಎರಡೇ ಕೈಗಳು.

ಚೀನದಲ್ಲಿ:– ಟುನ್ ಹುವಂಗ್‌ನ ... ಯೊಂದರಲ್ಲಿ ಗೋಡೆಯ ಮೇಲೆ ಚಿತ್ರಿತವಾಗಿರ... ಗಣಪತಿ ಆರನೇ ಶತಮಾನದ್ದೆಂದು ಚಿತ್ರಣ ಶೈ... ಯಿಂದ ಊಹಿಸಲಾಗಿದೆ. ಸೂರ್ಯ, ಚಂ... ನವಗ್ರಹಾದಿ ದೇವತೆಗಳೊಂದಿಗೆ ಈ ಗಣ... ಯನ್ನು ಚಿತ್ರಿಸಲಾಗಿದೆ. ಈ ಗಣಪತಿಗೆ ಎರ... ಕೈಗಳಿದ್ದು ತಲೆಯ ಹಿಂದೆ ಪ್ರಭಾವಲಯವಿ... ಜಪಾನಿನಲ್ಲಿ ಸಿಕ್ಕಿರುವಂತೆ ಇಲ್ಲಿಯೂ ಅ... ಗಣಪತಿಗಳು ಸಿಕ್ಕಿವೆ. ಇವಕ್ಕೆ ಕಾಂಗಿಟೆ... ಎಂದು ಹೆಸರು. ಅವಳಿ ರೂಪಗಳು ನಿಂತ... ಒಂದನ್ನೊಂದು ಆಲಂಗಿಸಿರುತ್ತವೆ.

ಜಪಾನದಲ್ಲಿ :– ಗಣಪತಿಗೆ ಜಪಾನಿಯ... ಕೊಟ್ಟಿರುವ ಹೆಸರುಗಳು ಬಿನಾಯಕ ಶೋಡೆ... ಮತ್ತು ಕಾಂಗಿಟೆನ್. ಪದ್ಮಾಸನದಲ್ಲಿ ಕುಳಿತಿರು... ಎರಡು ಕೈಗಳುಳ್ಳ ವಿವಿಧ ಗಣಪತಿಯ ರೂಪಗ... ಇಲ್ಲಿ ದೊರೆತಿವೆ. ಇವುಗಳ ಕೈಗಳಲ್ಲಿ ಮೂಲಂ... ಭಕ್ಷ್ಯಪಾತ್ರೆ, ಚತ್ರಿ, ಬಿಲ್ಲು–ಬಾಣ, ಹೂವಿ... ಹಾರ ಮೊದಲಾದವು ಕಂಡು ಬಂದಿವೆ. ಇ... ಗಳಿಗೆ ಸಾಮಾನ್ಯವಾಗಿ ಕಿರೀಟವಿರುವುದಿಲ್ಲ.

ಮೂರು ತಲೆಯ ಕಾಕುಜೆನ್ ಚೋ ಎಂ... ಹೆಸರಿನ ಗಣಪತಿಯ ಪ್ರತಿಮುಖದಲ್ಲಿ ಮೂ... ಕಣ್ಣುಗಳಿದ್ದು ಒಟ್ಟು ನಾಲ್ಕು ಕೈಗಳಿವೆ. ಇ... ಗಳಲ್ಲಿ ಕತ್ತಿ, ಮೂಲಂಗಿ, ಮೋದಕ ಮತ್ತು ರಾಜದಂಡಗಳಿವೆ. ಒಂದನ್ನೊಂದು ಆಲಂಗಿ... ಕೊಂಡಿರುವ ಅವಳಿ ಗಣಪತಿಗಳೂ ಇ... ದೊರೆತಿವೆ.

---

(6 ನೇ ಪುಟದಿಂದ)

ಡಾ. ಕೇಳ್ಕರ್ ಅವರ ವಸ್ತುಸಂಗ್ರಹಾಲಯದಲ್ಲೂ "ಆನೆಯ ಮೇಲೇರಿದ ಗಣಪತಿ"ಯ ಮೂರ್ತಿಯಿದೆ. (Eves Weekly 4-10) 1986 ನಗರ ಸಂಘದವರು ತಮ್ಮ ಆರಾಧ್ಯ ದೇವನಾದ ಗಣಪತಿಯು ಆನೆಯ ಮೇಲೆ ಕುಳಿತಂತೆ ಪರಿಕಲ್ಪಿಸಿ ಪೂಜಿಸುತ್ತಿದ್ದರೆಂದು ಇಲ್ಲಿ ವಿದಿತ! (ಪಣಂಬೂರ ದೇವಳದ ಆಡಳಿತ ಮೊಕ್ತೇಸರರ ಖಜಾನೆಯಲ್ಲಿ ಈ ಮೂರ್ತಿಯಿದೆ.)

ಆಗಮಗಳಲ್ಲಿ ಇಂತಹ ಮೂರ್ತಿಯ ಲಕ್ಷಣ ತಿಳಿದಿಲ್ಲವೆಂದು ಬೆಂಗಳೂರು ಶ್ರೀ. ಮ. ಶ್ರೀಧರಮೂರ್ತಿಯವರು ತಿಳಿಸುತ್ತಾರೆ.

ಕೃಷ್ಣನು ಆರಾಧಿಸಿದ 'ಸಿದ್ಧಿವಿನಾಯಕ'ನು 'ಪಂಚಾಸ್ಯ (ಸಿಂಹ)' ವಾಹನವೆಂದು ಪುರಾಣ ದಿಂದ ತಿಳಿಯುತ್ತದೆ. ಭಾವುಕರು ವಿವಿಧಾಶಯಗಳಿಂದ ದೇವರ ಮೂರ್ತಿಗಳನ್ನು ನಿರ್ಮಿಸಿ ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ದುಷ್ಟಕಾರ್ಯಗಳಿಗೆ ವಿಘ್ನಕಾರನೂ, ಶಿಷ್ಟಕಾರ್ಯಗಳಿಗೆ ವಿಘ್ನಹರನೂ ಆದ ಗಣೇಶನು ಎಲ್ಲ ಕಾರ್ಯಗಳಲ್ಲಿ ಪ್ರಥಮತಃ ಆರಾಧ್ಯನಾಗಿದ್ದಾನೆ.

ಗಜಾರೂಢಂ ಗಣಪತಿಂ
ಬುದ್ಧಿ ಸಿದ್ಧಿ ಪ್ರದಾಯಕಂ
ನಾಗರೈಃ ಪೂಜಿತಂ ವಂದೇ
ಶಿವಗೌರೀ ಸುಪುತ್ರಕಂ

(5 ನೇ ಪುಟದಿಂದ)

ಮಹಾಮರ್ಕಂ ಮಘವನ್ ಚಿತ್ರಮರ್ಚ...

ಇಂದ್ರಿಯಗಣಗಳಿಗೆ ಪ್ರೀತಿಕನಾದ ನೀನ... ನಮ್ಮ ಇಂದ್ರಿಯಗಳಲ್ಲಿ ಇರು. ಜ್ಞಾನಿಗಳ... ಮೊದಲಿಗನು ನೀನೆಂದು ಹೇಳುತ್ತಾರೆ. ನಿನ್ನ... ಪ್ರೇರಣೆ ಇಲ್ಲದೇ ಯಾವಕ್ರಿಯೆಯೂ ಇಲ್ಲ... ನೀನೆ ನನ್ನಲ್ಲಿ ನಿಂತು ಕೊಂಡು ನಿನ್ನ ಪೂ... ಯನ್ನು–ಮಾಡಿಸಿಕೊಳ್ಳು.

ಹೀಗೆ ವೇದಪ್ರತಿಪಾದ್ಯನೂ ಆದ ಶ್ರೀಗಣ... ಪತಿಯನ್ನು ಈ ಕೆಳಗಿನಂತೆ ಸ್ತೋತ್ರ ಮಾಡಬೇಕು.

ಏಕದಂತಾಯ ವಿದ್ಮಹೇ
ವಕ್ರತುಂಡಾಯ ಧೀಮಹಿ
ತನ್ನೋ ದಂತಿಃ ಪ್ರಚೋದಯಾತ್



# ದ್ವೈಪಾಯನರು ಹಾಗೂ ಭಾರತ

ವ್ಯಾಸಂ ವಸಿಷ್ಠ ನಪ್ತಾರಂ
ಶಕ್ತೇಃ ಪೌತ್ರಮಕಲ್ಮಷಮ್ ।
ಪರಾಶರಾತ್ಮಜಂ ವಂದೇ
ಶುಕತಾತಂ ತಪೋನಿಧಿಮ್ ॥

ಭಗವಾನ್ ವ್ಯಾಸರನ್ನು ಕುರಿತು ಇರುವ ಈ ಶ್ಲೋಕ ಪ್ರಸಿದ್ಧವಾದದ್ದು. ಇದರಲ್ಲಿ ವ್ಯಾಸರ ವಂಶ ವೃಕ್ಷದ ನಿರೂಪಣೆ ಇದೆ.

ವ್ಯಾಸರ ಜನ್ಮ ನಾಮ ದ್ವೈಪಾಯನ. ಇವರ ತಂದೆ ಪರಾಶರ. ಪರಾಶರರು ವಸಿಷ್ಠರ ಮೊಮ್ಮಗ ಮತ್ತು ಶಕ್ತಿ ಋಷಿಯ ಮಗ. ವಸಿಷ್ಠರು ಆಗಿನ ಕಾಲದಲ್ಲಿ ಮಹಾ ಜ್ಞಾನಿಗಳೆಂದೂ, ಬ್ರಹ್ಮರ್ಷಿಗಳೆಂದೂ ಗೌರವಿಸಲ್ಪಟ್ಟವರು. ಅವರ ಮೊಮ್ಮಗನಾದ ಪರಾಶರರೂ ಸಹ ವೇದವಿದರೂ ಮಹಾ ಮೇಧಾವಿಗಳೂ ಆಗಿದ್ದವರು.

ಇವರು ಬಹಳ ವರ್ಷಗಳವರೆಗೆ ತಪೋನಿರತರಾಗಿದ್ದು, ಬ್ರಹ್ಮಚಾರಿಗಳಾಗಿಯೇ ಇದ್ದರು. ಒಂದು ದಿನ ತಾವು ಕಲಿತ ಜ್ಞಾನದ ವಿವಿಧ ಮುಖಗಳ ಬಗ್ಗೆ ಚಿಂತನೆ ಮಾಡಿದರು. ಆಗ ಅವರಿಗೆ ಆ ಜ್ಞಾನ ರಾಶಿಯ ಆಗಾಧತೆ, ವೈಶಾಲ್ಯ ವೈವಿಧ್ಯ–ಇವು ಕಣ್ಣೆದುರು ನಿಂತವು. ಇಷ್ಟು ಅಗಾಧವಾದ ಜ್ಞಾನರಾಶಿ ವಿಭಾಗಗೊಳ್ಳದೇ ಹೋದರೆ ಮುಂದಿನ ಪೀಳಿಗೆಗೆ ಇದು ಏನೂ ಅರ್ಥವಾಗದೇ ವ್ಯರ್ಥವಾಗಿ ಉಳಿದು ಬಿಡುತ್ತದೆ ಎನ್ನಿಸಿತು. ಆ ಜೀವಪರ್ಯಂತ ಬ್ರಹ್ಮಚಾರಿಗಳಾಗಿಯೇ ಇರಬೇಕೆಂದು ಸಂಕಲ್ಪಿಸಿದ್ದ, ಪರಾಶರರು, ಜಗತ್‌ಕಲ್ಯಾಣಕ್ಕಾಗಿ, ಜ್ಞಾನರಾಶಿಯ ಉಳಿವಿಗಾಗಿ, ವಿವಾಹಿತರಾಗಿ ಮಗನನ್ನು ಪಡೆಯಲು ಮತ್ತು ಆ ಮಗನಿಗೆ ಜ್ಞಾನರಾಶಿಯನ್ನು ಉಪದೇಶಿಸಿ, ತಮ್ಮ ಉದ್ದೇಶವನ್ನು ತಿಳಿಸಲು ನಿಶ್ಚಯಿಸಿದರು. ಇದೇ ಗುಂಗಿನಲ್ಲಿ ದೇಶಸಂಚಾರ ಹೊರಟರು.

## ದ್ವೈಪಾಯನರ ಜನನ :

ಪರ್ಯಟನ ಕಾಲದಲ್ಲಿ ಒಂದುದಿನ, ಪರಾಶರರು, ಯಮುನಾನದಿಯ ಬಳಿಗೆ ಬಂದರು. ಅವರು ನದಿಯನ್ನು ದಾಟಿ ಆಚೆ ದಡಕ್ಕೆ ಹೋಗಬೇಕಿತ್ತು. ನದಿಯನ್ನು ದೋಣಿಯ ಮೂಲಕವೇ ದಾಟಬೇಕಿತ್ತು. ದೋಣಿಯನ್ನು ಎಲ್ಲರೂ ನಡೆಸುವಂತಿರಲಿಲ್ಲ. ದೋಣಿಯನ್ನು ನಡೆಸುವ ಅಧಿಕಾರ ಪಡೆದಿದ್ದವನು ದಾಶರಾಜ ಎಂಬ ಆ ಪ್ರದೇಶದ ಬೆಸ್ತರ ನಾಯಕ. ಪರಾಶರರು ಬಂದಾಗ ಅವನು ಊಟಮಾಡುತ್ತಿದ್ದನು. ಪರಾಶರರು ನದಿಯ ತಡಿಯಲ್ಲಿರುವ ವಿಷಯ ಅವನಿಗೆ ತಿಳಿಯಿತು. ತಡವಾದರೆ ಋಷಿ ಶಾಪಕೊಟ್ಟಾನು ಎಂಬ ಭಯದಿಂದ ತನ್ನ ಸಾಕುಮಗಳಾದ ಸತ್ಯವತಿಯನ್ನು ದೋಣಿ ನಡೆಸುವಂತೆ ಹೇಳಿ ಕಳಿಸಿದನು.

ಸತ್ಯವತಿ ಬಂದು ದೋಣಿಯನ್ನು ನೀರಿಗೆ ತಳ್ಳಿದಳು. ಪರಾಶರರು ದೋಣಿಯನ್ನು ಹತ್ತಿ ಕುಳಿತರು. ಸತ್ಯವತಿ ದೋಣಿಯನ್ನು ಹತ್ತಿ, ಪರಾಶರರಿಗೆ ಅಭಿಮುಖವಾಗಿ ನಿಂತು, ದೊಣ್ಣೆಯನ್ನು ನೀರಿಗಿಳಿಬಿಟ್ಟು ಬಲವಾಗಿ ಮೀಟಿ, ದೋಣಿಯನ್ನು ಮುನ್ನಡೆಸಲಾರಂಭಿಸಿದಳು. ಸುಂದರಿಯೂ, ಯುವತಿಯೂ ಆದ ಸತ್ಯವತಿಯ ಅಂಗಸೌಷ್ಠವದತ್ತ ಋಷಿಯ ಕಣ್ಣು ಹಾಯ್ದವು; ಮನಸ್ಸು ಚಂಚಲವಾಯಿತು. ಸ್ವಯಂಪ್ರಜ್ಞರಾದ ಪರಾಶರರಿಗೆ ಒಂದುಕ್ಷಣ, "ನಾನು ಎಂತಹ ತಪ್ಪು ಮಾಡುತ್ತಿದ್ದೇನೆ" ಎನ್ನಿಸಿತು. ಅಂತಃಪ್ರವೃತ್ತಿಯತ್ತ ಬುದ್ಧಿಯನ್ನು ತಿರುಗಿಸಿ ತಮ್ಮನ್ನೊಮ್ಮೆ ವಿಮರ್ಶಿಸಿಕೊಂಡರು. ಅಂತರಂಗದಲ್ಲಿ ಸುಪ್ತವಾಗಿರುವ ಪುತ್ರಾಪೇಕ್ಷೆಯ ಪರಿಣಾಮ ಅದು ಎಂದು ತಕ್ಷಣ ಅವರಿಗೆ ತಿಳಿಯಿತು. ತಮ್ಮ ಮಾನಸಿಕ ಚಂಚಲತೆ ತಪ್ಪಲ್ಲ ಎಂದೂ ಅನ್ನಿಸಿತು. ಆದರೆ ಇವಳು ಬೆಸ್ತರ ಕನ್ಯೆ – ಎಂಬ ಪರಿಜ್ಞಾನವೊಂದು ಮೂಡಿ ನಿಂತಿತು. ಮತ್ತೆ ಅಂತರ್ಮುಖಿಯಾದರು, ಪರಾಶರರು ಇವಳ ಜನ್ಮ ರಹಸ್ಯವನ್ನು ಭೇದಿಸುವತ್ತ ಮನಸ್ಸನ್ನು ಹರಿಯಬಿಟ್ಟರು. ಕೊನೆಗೆ ಇವಳು ಬೆಸ್ತರಕನ್ಯೆ ಅಲ್ಲ; ವಸು ಕುಲದ ಕನ್ಯೆ ಎನ್ನುವುದೂ, ಕಾರಣಾಂತರದಿಂದ ದಾಶರಾಜನ ಸಾಕು ಮಗಳಾಗಿದ್ದಾಳೆ ಎಂಬುದೂ ತಿಳಿಯಿತು. ಇವಳಲ್ಲಿ ಮಗನನ್ನು ಪಡೆದರೆ ಉದ್ದೇಶ ಸಫಲವಾಗುತ್ತದೆ ಎಂದೂ ಭಾಸವಾಯಿತು.

ಸತ್ಯವತಿ ಜಾಣೆ. ಋಷಿಯ ದೃಷ್ಟಿಯ ಇಂಗಿತವನ್ನು ಬೇಗನೆ ಅರಿತಳು. ತಾನು ಬೆಸ್ತರ ಕನ್ಯೆ ಎಂಬುದನ್ನು ತಿಳಿಸಿದಳು. ಪರಾಶರರು, ಅವಳಿಗೆ, ಅವಳ ಜನ್ಮದ ವೃತ್ತಾಂತವನ್ನೂ, ಈಗ ಅವಳು ದಾಶರಾಜನ ಸಾಕುಮಗಳಾಗಿರುವುದನ್ನೂ ತಿಳಿಸಿದರು. ಅನಂತರ, ಅವರು, ತಪಃ ಪ್ರಭಾವದಿಂದ ಮತ್ಸ್ಯಗಂಧಿಯಾಗಿದ್ದ ಅವಳನ್ನು ಯೋಜನಗಂಧಿಯನ್ನಾಗಿ ಮಾಡಿದರು. "ಪುರುಷ ಸಂಸರ್ಗ ಪಡೆದ ಮೇಲೆ ಕನ್ನೆಗೆ ಕನ್ಯತ್ವ ಉಳಿಯುವುದೇ?"– ಎಂಬ ಸಂಶಯ ಸತ್ಯವತಿಗೆ ಮೂಡಿತು. ತಮ್ಮ ತಪಃ ಪ್ರಭಾವದಿಂದ ಪುನಃ ಕನ್ಯತ್ವವನ್ನು ಕೊಡುವುದಾಗಿ, ಪರಾಶರರು ಹೇಳಿದರು. ಋಷಿಯ ಮಾತಿನಲ್ಲಿ ನಂಬಿಕೆಯನ್ನಿಟ್ಟಿದ್ದ ಅವಳು ದೇಹಾರ್ಪಣೆಗೆ ಒಪ್ಪಿದಳು. ದೋಣಿ, ಯಮುನಾನದಿಯ ಮಧ್ಯೆ ಇದ್ದ ಒಂದು ನಡುಗಡ್ಡೆಗೆ ಬಂದಿತು. ಇಬ್ಬರೂ ದೋಣಿ ಇಳಿದರು.

"ಗಾಂಧರ್ವ ವಿವಾಹದಿಂದ ಹುಟ್ಟಿದ ಮಗ, ವೇದವಾಙ್ಮಯವನ್ನು ವಿಭಾಗಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆಯೇ ?" – ಪರಾಶರರಿಗೆ ಇದ್ದಕ್ಕಿದ್ದಂತೆಯೇ ಈ ಸಮಸ್ಯೆ ತಲೆದೋರಿತು. ಎಷ್ಟು, ಚಿಂತಿಸಿದರೂ ಉತ್ತರ ದೊರೆಯಲಿಲ್ಲ. ಇದರ ಪರಿಹಾರಕ್ಕಾಗಿ ತನ್ನ ಅಜ್ಜ ವಸಿಷ್ಠರನ್ನೂ ಪಿತೃಲೋಕದ್ದ ಸತ್ಯವತಿಯ ಜನ್ಮ ಜನ್ಮಾಂತರಗಳ ಪಿತೃಗಳಾದ ಬರ್ಹಿಷದರನ್ನೂ ನೆನೆದರು. ಅರುಂಧತಿ ಸಹಿತವಾಗಿ ವಸಿಷ್ಠರು, ಪಿತೃಲೋಕದಿಂದ ಬರ್ಹಿಷದರು ಅಲ್ಲಿಗೆ ಬಂದರು. ಅವರೆದುರು ತನ್ನ ಅಭೀಪ್ಸೆಯನ್ನು ವಿವರಿಸಿದರು, ಪರಾಶರರು. ಇವರ ದೂರದೃಷ್ಟಿಯನ್ನು ಮೆಚ್ಚಿದ ಬರ್ಹಿಷದರು, ಸತ್ಯವತಿಯ ನಿಜ ಪಿತೃವಾದ ವಸುರಾಜನನ್ನು ಕರೆಸಿದರು. ವೈಶಾಖ ಮಾಸದ ಶುಕ್ಲ ತ್ರಯೋದಶಿ ಮಧ್ಯಾಹ್ನ ಮೃಗಶಿರಾ ನಕ್ಷತ್ರದ ಶುಭಯೋಗದಲ್ಲಿ ಪರಾಶರ ಸತ್ಯವತಿಯರ ವಿವಾಹ ವಿಧಿವತ್ತಾಗಿ, ಯಮುನಾ ನದಿಯ ನಡುಗಡ್ಡೆಯಲ್ಲಿ ನೆರವೇರಿತು. ವಸಿಷ್ಠಾದಿಗಳು ಆಶೀರ್ವಾದ ಮಾಡಿ ಹೊರಟು ಹೋದರು. ಪರಾಶರರು ತಮ್ಮ ತಪಃ ಪ್ರಭಾವದಿಂದ ಆ ಪ್ರದೇಶದಲ್ಲಿ ಮಂಜು ಕವಿಯುವಂತೆ ಮಾಡಿದರು. ಗೋಪ್ಯವಾಗಿ ಅವರಿಬ್ಬರ ದೇಹ ಸಂಪರ್ಕವುಂಟಾಯಿತು. ಇದರ ಪರಿಣಾಮವಾಗಿ ಅಸಾಧಾರಣ ಸದ್ಯೋಜಾತ ಮಗುವೊಂದಕ್ಕೆ ಜನ್ಮವಿತ್ತಳು, ಸತ್ಯವತಿ. ಮಗುವಿಗೆ ಹುಟ್ಟಿದ ತಕ್ಷಣವೇ ನಡೆಯುವ ಚೈತನ್ಯ, ಮಾತನಾಡುವ ಶಕ್ತಿ ಬಂದಿತ್ತು. ತಮ್ಮ ಆಸೆಯನ್ನು ಈಡೇರಿಸಿದ ಸತ್ಯವತಿಗೆ ಪರಾಶರರು ಪುನಃ ಕನ್ಯತ್ವವನ್ನು ಕರುಣಿಸಿದರು. ದ್ವೀಪದಲ್ಲಿ ಹುಟ್ಟಿದ್ದರಿಂದ ಆ ಮಗುವಿಗೆ ದ್ವೈಪಾಯನ ಎಂದು ಹೆಸರಿಟ್ಟರು. ಮಗುವಿನೊಂದಿಗೆ ಪರಾಶರರು ಮುನ್ನಡೆಯಲು ಸಿದ್ಧರಾದರು. ಮಗು ಬಂದು ತಾಯಿಗೆ ನಮಸ್ಕರಿಸಿ, "ನೀ ಕರೆದಾಗ ಬರುತ್ತೇನೆ" ಎಂದು ಹೇಳಿ, ಆಶೀರ್ವಾದ ಪಡೆದು, ತಂದೆಯನ್ನು ಹಿಂಬಾಲಿಸಿತು. ಈಗ ಕವಿದಿದ್ದ ಮಂಜು ಹರಿಯಿತು. ಸತ್ಯವತಿ ದೋಣಿಯನ್ನು ನಡೆಸಿಕೊಂಡು ಬಂದು, ಮನೆ ಸೇರಿದಳು.

## ವೇದವ್ಯಾಸ :

ಇತ್ತ ಪರಾಶರರು ಆ ಮಗುವಿನೊಂದಿಗೆ, ತಮ್ಮ ತಾಯಿಯಾದ, ಅದೃಶ್ಯಂತಿಯು ಇದ್ದ ಆಶ್ರಮಕ್ಕೆ ಬಂದರು. ಇವಳು, ತನ್ನ ಪತಿಯಾದ ಶಕ್ತಿ ಋಷಿಯನ್ನು – (ಪರಾಶರರು ತಾಯಿಯ

ಗರ್ಭದಲ್ಲಿರುವಾಗಲೇ) ಒಬ್ಬ ರಾಕ್ಷಸನು ತಿಂದದ್ದರಿಂದ, ಆಶ್ರಮದಲ್ಲಿ ತಾನೊಬ್ಬಳೇ ಇದ್ದಳು. ಅಲ್ಲಿ ಆ ಮಗುವಿಗೆ ಜಾತಕರ್ಮ, ಉಪನಯನ–ಮುಂತಾದ ಸಂಸ್ಕಾರಗಳನ್ನು, ಪರಾಶರರು, ನೆರವೇರಿಸಿದರು. ಅನಂತರ ದ್ವೈಪಾಯನನಿಗೆ ವೇದ ವಾಙ್ಮಯವನ್ನು ಪೂರ್ಣವಾಗಿ ಹೇಳಿಕೊಟ್ಟು, ಅದನ್ನು ವರ್ಗೀಕರಣ ಮಾಡುವಂತೆ ತಿಳಿಸಿದರು. ತಂದೆಯ ಆಜ್ಞಾನುಸಾರ ವೇದ ವಾಙ್ಮಯವನ್ನು ಋಕ್, ಯಜುರ್, ಸಾಮ ಮತ್ತು ಅಥರ್ವ – ಎಂದು ನಾಲ್ಕು ಪ್ರಧಾನ ವಿಭಾಗಗಳನ್ನಾಗಿ ವಿಭಾಗಿಸಿದರು. ಅನಂತರ ಅವುಗಳನ್ನು ಸಂಹಿತೆಗಳಾಗಿ ವಿಭಾಗ ಮಾಡಿದರು. ಈ ಕಾರ್ಯವನ್ನು ಮಾಡಿದ್ದರಿಂದ ದ್ವೈಪಾಯನನಿಗೆ "ವ್ಯಾಸ", "ವೇದವ್ಯಾಸ" ಎಂಬ ಹೆಸರು ಬಂದಿತು. ಇವರು ಮಾಸಲು ಕಪ್ಪು ಬಣ್ಣದಿಂದ ಕೂಡಿದ್ದರು. ಆದ್ದರಿಂದ ಇವರನ್ನು "ಕೃಷ್ಣ" ಎಂದೂ "ಕೃಷ್ಣದ್ವೈಪಾಯನ" ಎಂದೂ ಕರೆದರು. ಇವರು ಘೃತಾಚಿ ಎಂಬ ಅಪ್ಸರ ಸ್ತ್ರೀಯನ್ನು ವಿವಾಹವಾಗಿ, ಶುಕ–ಎಂಬ ಮಗನನ್ನು ಪಡೆದರು. ಅವನಿಗೆ ಸಕಲ ವೇದ ವಾಙ್ಮಯವನ್ನೂ ಕಲಿಸಿದರಲ್ಲದೆ, ಸೃಷ್ಟಿ ಸ್ಥಿತಿಲಯಗಳ ಕ್ರಮ, ಕಾಲ ವಿಭಾಗ–ಮುಂತಾದುವನ್ನೂ ವಿವರಿಸಿದರು. ಅಲ್ಲದೆ ಭಾಗವತದ ಕಥೆಯನ್ನೂ ಹೇಳಿ, ಮಗನಾದ ಶುಕನನ್ನು, ವ್ಯಾಸರು ಅದ್ವಿತೀಯ ವಿದ್ವಾಂಸನನ್ನಾಗಿ ಮಾಡಿದರು.

ಭಾರತೀಯರ ಮಹಾಯುಗ ಗಣನೆಯಲ್ಲಿ ಈಗಾಗಲೇ 27 ಮಹಾಯುಗಗಳು ಕಳೆದು ಹೋಗಿವೆ. ಒಂದೊಂದು ಮಹಾಯುಗದಲ್ಲಿಯೂ ಅತ್ಯಂತ ಮೇಧಾವಿಗಳೂ ಮಹಾಜ್ಞಾನಿಗಳೂ ಬ್ರಹ್ಮರ್ಷಿಗಳೂ ಆದವರೊಬ್ಬರನ್ನು ಗೌರವಿಸಿ, ಅವರನ್ನು "ವ್ಯಾಸ" ಎಂಬ ಹೆಸರಿನಿಂದ ಕರೆಯುತ್ತಾರೆ. ಈಗ ಇಪ್ಪತ್ತೆಂಟನೆಯ ಮಹಾಯುಗ ನಡೆಯುತ್ತಿದೆ. ಕೃಷ್ಣ ದ್ವೈಪಾಯನರು ಈ ಯುಗದ 'ವ್ಯಾಸ'ರಾಗಿದ್ದಾರೆ.

## ಜಯ-ಭಾರತ-ಮಹಾಭಾರತ :

ಈ ಕೃಷ್ಣದ್ವೈಪಾಯನರೇ ಸಂಸ್ಕೃತದ ಮಹಾಭಾರತದ ಕರ್ತೃ. ಈ ಕಥೆಯಲ್ಲಿ ಬರುವ ಧೃತರಾಷ್ಟ್ರ, ಪಾಂಡು, ವಿದುರ ಇವರು, ಇವರ ಮಕ್ಕಳು. ದುರ್ಯೋಧನಾದಿ ಕೌರವರೂ, ಪಾಂಡವರೂ ಇವರ ಮೊಮ್ಮಕ್ಕಳು. ಅಭಿಮನ್ಯು, ಘಟೋತ್ಕಚ–ಮುಂತಾದವರು, ಮರಿಮಕ್ಕಳು ದ್ರೋಣ, ಕೃಪ–ಮುಂತಾದವರು ದ್ವೈಪಾಯನರ ಸಮಕಾಲೀನ ವಿದ್ವಾಂಸರು. ಯಾದವರು, ದ್ರುಪದ, ವಿರಾಟ–ಮುಂತಾದವರು, ಇವರು ಬಲ್ಲ
ರಾಜವಂಶದವರು. ಭೀಷ್ಮ, ಶಂತನು–ಮುಂ
ದವರ ವಂಶವನ್ನು ಆಮೂಲಾಗ್ರವಾ
ದ್ವೈಪಾಯನರು ತಿಳಿದಿದ್ದರು. ಆದ್ದರಿಂದ
ಮಹಾಭಾರತದ ಕಥೆ ಕಟ್ಟು ಕಥೆಯಲ್ಲ. ವ್ಯಾಸ
ಕಣ್ಣಾರೆ ಕಂಡು ಹೇಳಿದ ಸಜ್ಜನರ–ದುರ್ಜನ
ಧರ್ಮದ–ಅಧರ್ಮದ, ರಾಜಕೀಯದ–ಸಾಮಾ
ಕದ, ಐತಿಹಾಸಿಕ ಕಥೆ. ದ್ವೈಪಾಯನ
ಮಹಾಭಾರತದಲ್ಲಿ ಕೇವಲ ಕಥೆಯನ್ನು ಮಾ
ಹೇಳದೆ ಧರ್ಮಾಧರ್ಮಗಳ ಬಗ್ಗೆಯೂ ವಿಚಾ
ಮಾಡಿದ್ದಾರೆ. ಅಧರ್ಮಕ್ಕೆ ಸಿಗುವ ಜ
ತಾತ್ಕಾಲಿಕ, ಧರ್ಮಕ್ಕೆ ಸಿಗುವ ಜಯ ಶಾಶ್ವ
ಎಂಬ ತತ್ತ್ವವನ್ನು ಜಗತ್ತಿಗೆ ಸಾರಿ ಹೇಳಿದ್ದಾ
ಆದ್ದರಿಂದಲೇ ಈ ಕಾವ್ಯವನ್ನು ಅವರು "ಜಯ
ಎಂದು ಕರೆದರು. ಕೆಲವು ವರ್ಷಗಳ ನಂ
ಇದು "ಭಾರತ" ಎಂಬ ಹೆಸರನ್ನು ಪಡೆಯಿತ
ಮತ್ತೆ ಹಲವು ವರ್ಷಗಳು ಕಳೆದ ಮೇಲೆ "ಮಹ
ಭಾರತ" ವಾಯಿತು.

ವಿಷಯವನ್ನು ವಿಭಾಗ ಮಾಡುವ ಕ
ದ್ವೈಪಾಯನರಿಗೆ ಈ ಹಿಂದೆಯೇ ಹಸ್ತಗತವ
ಗಿತ್ತು. ಹಾಗಾಗಿ ಇವರು ಮಹಾಭಾರತದ ಕ
ಯನ್ನು ಘಟನಾಬದ್ಧವಾಗಿ ಬರೆದಿದ್ದಾರೆ. ಇದರ
ಪ್ರಧಾನ ಘಟನೆಗಳಿಗೆ ಸಂಬಂಧಿಸಿದಂತೆ ಹ
ನೆಂಟು ಪ್ರಧಾನ ಪರ್ವಗಳಿವೆ. ಪೋಷಕವಾ
ಉಪಘಟನೆಗಳಿಗೆ ಸಂಬಂಧಿಸಿದಂತೆ ವಿಷಯವನ
ಉಪಪರ್ವಗಳಾಗಿ ವಿಭಾಗಿಸಿದ್ದಾರೆ. ಪುನಃ ಉ
ಘಟನೆಗಳಿಗೆ ಪೂರಕಗಳಾದ, ಪ್ರಧಾನ ಘಟ
ಗಳಿಗೆ ಪೋಷಕಗಳಾದ ಕಥೆ – ಉಪಕಥೆಗಳನ
ಅಧ್ಯಾಯಗಳ ರೂಪದಲ್ಲಿ ಉಪವಿಭಾಗ ಮಾ
ಕೊಂಡಿದ್ದಾರೆ. ಹೀಗೆ ಮಹಾಭಾರತದಲ್ಲಿ ಹ
ನೆಂಟು ಪರ್ವಗಳೂ, ಒಂದುನೂರ ಆರು ಉ
ಪರ್ವಗಳೂ, ಎರಡು ಸಾವಿರದ ಒಂದುನೂ
ಇಪ್ಪತ್ತೈದು ಅಧ್ಯಾಯಗಳೂ ಇವೆ.

ಇಲ್ಲಿ ಗಮನಿಸಬೇಕಾದ ಒಂದು ಸಂಗತಿ
ಎಂದರೆ, ದ್ವೈಪಾಯರು ಎಲ್ಲಿಯೂ ಈ ಕ
ಯನ್ನು ನೇರವಾಗಿ ಬಹಿರಂಗಗೊಳಿಸಿಲ್ಲ. ಕುರ
ಕ್ಷೇತ್ರ ಯುದ್ಧ ನಡೆದು ಕೆಲವು ವರ್ಷಗಳನಂತರ
ಜನಮೇಜಯನ ಯಜ್ಞಕಾಲದಲ್ಲಿ ವೈಶಂಪ
ಯನರಿಂದ ಈ ಕಥೆಯನ್ನು ಬಹಿರಂಗಗೊಳಿಸಿದ್ದಾರ
ಈ ವೇಳೆಗಾಗಲೇ ದ್ವಾಪರಯುಗವು ಅಂತ
ಗೊಂಡಿತ್ತು.

ಪ್ರಾರಂಭದಲ್ಲಿ, ಮುಖ್ಯ ಕಥೆಗೆ ಉಪಸ್ತಂಭ
ಗಳಾದ ಪೌಲೋಮ ಪರ್ವದ ಮತ್ತು ಆಸ್ತಿ
ಪರ್ವದ ಕಥೆಗಳನ್ನು ಹೇಳಿ ಸಂಭವಪರ್ವದ
ಕೌರವ–ಪಾಂಡವರ ಮೂಲಪುರುಷರ ಕಥೆಯನ್ನು
ಹೇಳಿದ್ದಾರೆ. ಶಂತನು ಚಕ್ರವರ್ತಿಯನಂತರ ಕ
ಅತ್ಯಪಟಿತವಾಗಿ ಮುಂದುವರಿಯುತ್ತದೆ.

## ನಿಯೋಗ ಪುರುಷ :

ಶಂತನು ಚಂದ್ರವಂಶದ ಪ್ರಸಿದ್ಧ ಚಕ್ರವರ್ತಿ, ಇವನ ಮೊದಲ ಪತ್ನಿ ಗಂಗಾದೇವಿ ಇವಳ ಮಗ ಭೀಷ್ಮ. ಶಂತನು ಚಕ್ರವರ್ತಿಯ ಎರಡನೆಯ ಹೆಂಡತಿ ಸತ್ಯವತಿ. ಈ ಮೊದಲು ಇವಳು ಪರಾಶರರಿಂದ ದ್ವೈಪಾಯನನನ್ನು ಪಡೆದು ಪುನಃ ಕನ್ಯತ್ವ ಪಡೆದಿದಳು. ಚಕ್ರವರ್ತಿನಿಯಾದ ಮೇಲೆ ಶಂತನು ರಾಜನಿಂದ, ಚಿತ್ರಾಂಗದ ಮತ್ತು ವಿಚಿತ್ರ ವೀರ್ಯ ಎಂಬ ಇಬ್ಬರು ಮಕ್ಕಳನ್ನು, ಇವಳು ಪಡೆದಳು. ಚಿತ್ರಾಂಗದ ಮತ್ತು ವಿಚಿತ್ರ ವೀರ್ಯ – ಇವರಿಬ್ಬರೂ ಮಕ್ಕಳಿಲ್ಲದೇ ಸತ್ತು ಹೋದರು. ಭೀಷ್ಮರ ಸೂಚನೆಯಂತೆ ಸತ್ಯವತಿ ದ್ವೈಪಾಯನರನ್ನು ನೆನೆದಳು. ಕೊಟ್ಟ ಮಾತಿನಂತೆ, ಅವರು, ತಾಯಿಯ ಬಳಿ ಬಂದರು. ತನ್ನ ಸೊಸೆಯಂದಿರೊಂದಿಗೆ ನಿಯೋಗ ನಡೆಸಿ, ವಂಶೋದ್ಧಾರ ಮಾಡಬೇಕೆಂದು ಸತ್ಯವತಿ ಕೇಳಿಕೊಂಡಳು, ಅದಕ್ಕೆ ಒಪ್ಪಿದ ಅವರು, ಅಂಬಿಕೆ, ಅಂಬಾಲಿಕೆ ಮತ್ತು ದಾಸಿ – ಇವರಲ್ಲಿ ನಿಯೋಗ ಪಡೆದು ಹೊರಟು ಹೋದರು. ಇದರ ಫಲವಾಗಿ ಅಂಬಿಕೆಯಲ್ಲಿ ಧೃತರಾಷ್ಟ್ರ, ಅಂಬಾಲಿಕೆಯಲ್ಲಿ ಪಾಂಡು, ದಾಸಿಯಲ್ಲಿ ವಿದುರ ಹುಟ್ಟಿದರು. ಇಲ್ಲಿಂದ ಮುಂದೆ ದ್ವೈಪಾಯನರಿಗೆ ಹಸ್ತಿನಾವತಿಯ ಈ ಅರಸು ಪೀಳಿಗೆಯೊಂದಿಗೆ ಅವಿಚ್ಛಿನ್ನವಾದ, ವಾತ್ಸಲ್ಯಮಯವಾದ ಸಂಬಂಧ ಬೆಸೆದುಕೊಂಡಿತು.

ಧೃತರಾಷ್ಟ್ರ ರಾಜ್ಯಭಾರ ನಡೆಸುತ್ತಿದ್ದ ಕಾಲ. ಪಾಂಡುರಾಜ ತಪಸ್ಸು ಮಾಡುವ ಉದ್ದೇಶದಿಂದ ಕುಂತಿ ಮಾದ್ರಿಯರೊಂದಿಗೆ ಕಾಡಿಗೆ ಹೋದನು. ಕೆಲವು ದಿನ ಕಳೆದಮೇಲೆ ಕುಂತಿ ಮಂತ್ರೋಪದೇಶದ ಬಲದಿಂದ ಗರ್ಭವತಿಯಾಗಿ ಯುಧಿಷ್ಠಿರನನ್ನು ಪಡೆದಳು. ಈ ಸುದ್ದಿ ಹಸ್ತಿನಾಪುರವನ್ನು ತಲುಪಿತು. ಈ ವೇಳೆಗೆ ಗಾಂಧಾರಿಯೂ ಗರ್ಭವತಿಯಾಗಿದ್ದಳು. ತನಗಿಂತಲೂ ಮೊದಲು ಕುಂತಿಗೆ ಮಕ್ಕಳಾಯಿತಲ್ಲ ಎಂದು ಗಾಂಧಾರಿಗೆ ಕಸಿವಿಸಿಯಾಯಿತು. ಈರ್ಷ್ಯಾಪೂರಿತವಾದ ಈ ದುಃಖವನ್ನು ತಡೆದುಕೊಳ್ಳಲಾಗದೆ, ಅವಳು, ತನ್ನ ಗರ್ಭವನ್ನು ಹೊಸೆದುಕೊಂಡಳು. ಗರ್ಭವು ಜಾರಿ ನೆಲದ ಮೇಲೆ ಬಿದ್ದು ನೂರಾರು ಚೂರುಗಳಾಯಿತು. ಈ ವಿಷಯ ಕಾಡಿನಲ್ಲಿದ್ದ ದ್ವೈಪಾಯನರಿಗೆ ತಿಳಿಯಿತು. ಅವರು ತಕ್ಷಣವೇ ಹಸ್ತಿನಾವತಿಗೆ ಬಂದರು. ಗಾಂಧಾರಿಯನ್ನು ಬೈದರು. ಕೊಪ್ಪರಿಗೆಯನ್ನು ತರಿಸಿ, ಅದರಲ್ಲಿ ತುಪ್ಪವನ್ನು ತುಂಬಿಸಿ, ಗರ್ಭದ ಚೂರುಗಳನ್ನು ಅದರಲ್ಲಿರಿಸಿ, ಮಂತ್ರಬಲದಿಂದ ಅವು ನಾಶವಾಗದಂತೆ ರಕ್ಷಿಸಿ, ಪುನಃ ಕಾಡಿಗೆ ಹೊರಟು ಹೋದರು.

## ಪಾಂಡವ ಪ್ರೇಮಿ :

ಪಾಂಡುವಿನ ಮರಣಾನಂತರ ಮಾದ್ರಿ ಸಹಗಮಿಸಿ, ಕುಂತಿ ಮತ್ತು ಪಾಂಡವರನ್ನು ಋಷಿಗಳು ಹಸ್ತಿನಾಪುರಕ್ಕೆ ಕರೆತಂದು ಬಿಟ್ಟು ಹೋದರು. ಇದನ್ನರಿತ ದ್ವೈಪಾಯನರು ಹಸ್ತಿನಾಪುರಕ್ಕೆ ಬಂದರು. ಪಾಂಡುವಿನ ಉತ್ತರಕ್ರಿಯೆಗಳನ್ನು ನೆರವೇರಿಸಿಸಿ, ಎಲ್ಲರನ್ನೂ ಸಮಾಧಾನಮಾಡಿದರು. ಈ ವೇಳೆಗಾಗಲೇ ದುರ್ಯೋಧನ-ಮುಂತಾದ ಕೌರವರೂ, ಯುಧಿಷ್ಠಿರಾದಿ ಪಾಂಡವರೂ ಸಾಕಷ್ಟು ದೊಡ್ಡವರಾಗಿದ್ದರು. ಅವರ ವರ್ತನೆ, ಪ್ರವೃತ್ತಿಗಳು ಅವರ ನಿಶ್ಚಿತ ಮನೋಧರ್ಮಗಳನ್ನು ಪ್ರತಿಬಿಂಬಿಸುತ್ತಿದ್ದುವು ದ್ವೈಪಾಯನರು, ಭವಿಷ್ಯದ ದಿನಗಳಲ್ಲಿ, ಹಸ್ತಿನಾವತಿಯ ಅರಮನೆಯ ಅಂತರಂಗವು ಕಳವಳಕಾರಿಯಾಗುತ್ತದೆ ಎಂಬುದನ್ನು ಅರಿತರು. ಆದ್ದರಿಂದ ಆ ಕಿರಿಕಿರಿಯ ದಿನಗಳನ್ನು ತನ್ನ ತಾಯಿ ನೋಡಬಾರದು ಎಂದು ಭಾವಿಸಿ, ಕಾಡಿಗೆ ಕರೆದೊಯ್ಯಲು ನಿರ್ಧರಿಸಿದರು. ಇದನ್ನು ತಿಳಿದ ಅಂಬಿಕೆ ಅಂಬಾಲಿಕೆಯರು ತಾವೂ ಬರುವುದಾಗಿ ಹೇಳಿದರು. ಒಪ್ಪಿದ ದ್ವೈಪಾಯರು ಅವರನ್ನೆಲ್ಲಾ ತಮ್ಮೊಡನೆ ಕರೆದೊಯ್ದರು. ಅವರಿಗೆ ತಪಸ್ಸು ಮಾಡುವ ರೀತಿಯನ್ನು ಉಪದೇಶಿಸಿ, ಅವರು ಸದ್ಗತಿಯನ್ನು ಪಡೆಯುವಂತೆ ಮಾಡಿದರು.

ವಾರಣಾವತದ ಅರಗಿನ ಮನೆಯಲ್ಲಿ ಅನಾಹುತವಾಗುವ ಮೊದಲೇ ಪಾಂಡವರು ಗುಪ್ತಮಾರ್ಗದಿಂದ ಕಾಡನ್ನು ಸೇರಿದ್ದರು. ಅಲ್ಲಿ ಭೀಮನು ಹಿಡಿಂಬನನ್ನು ವಧಿಸಿ. ಹಿಡಿಂಬೆಯನ್ನು ವರಿಸಿ, ಘಟೋತ್ಕಚನನ್ನು ಪಡೆದನು. ಅಲ್ಲಿಂದ ಹೊರಟ ಪಾಂಡವರು ಮುಂದೆ ಏನು ಮಾಡಬೇಕೆಂದು ಚಿಂತಿಸುತ್ತಾ ಮುಂದುವರಿಯುತ್ತಿದ್ದರು. ದುರ್ಯೋಧನಾದಿಗಳಿಂದ ಪಾಂಡವರಿಗೆ ಒದಗುತ್ತಿರುವ ಕಷ್ಟಗಳು ದ್ವೈಪಾಯನರಿಗೆ ತಿಳಿಯಿತು. ಅವರು ಪಾಂಡವರಿದ್ದಲ್ಲಿಗೆ ಬಂದರು. ಅವರನ್ನು ಸಮಾಧಾನ ಮಾಡಿ, ಏಕಚಕ್ರ ನಿವಾಸಿಯಾದ ಒಬ್ಬ ಬ್ರಾಹ್ಮಣನ ಪರಿಚಯ ಮಾಡಿಕೊಟ್ಟು, ಅಲ್ಲಿ ವಾಸಿಸುತ್ತಿದ್ದು ದೇಶಕಾಲಗಳಿಗೆ ಹೊಂದಿಕೊಂಡು ನಡೆಯುವಂತೆ ಬುದ್ಧಿ ಹೇಳಿ, ತಮ್ಮ ಆಶ್ರಮಕ್ಕೆ ಹೊರಟು ಹೋದರು.

ಬಕಾಸುರನ ವಧೆಯನಂತರವೂ ಪಾಂಡವರು ಕೆಲವುದಿನ ಏಕ ಚಕ್ರನಗರದಲ್ಲಿ ಇದ್ದರು. ಅವರು ಭಿಕ್ಷಾವೃತ್ತಿಯಿಂದಲೇ ಜೀವಿಸುತ್ತಿದ್ದರು. ಯುಧಿಷ್ಠಿರನಿಗೆ ತಮ್ಮ ಭವಿಷ್ಯದ ಬಗ್ಗೆಯೇ ಚಿಂತೆ ಆವರಿಸಿತ್ತು. ಇದು ದ್ವೈಪಾಯನರಿಗೆ ತಿಳಿಯಿತು. ಅವರು ಏಕಚಕ್ರ ನಗರಕ್ಕೆ ಬ್ರಾಹ್ಮಣನ ವೇಷದಲ್ಲಿ ಬಂದು, ದ್ರೌಪದಿಯ ಜನ್ಮವೃತ್ತಾಂತವನ್ನು ತಿಳಿಸಿ – "ನೀವು ಪಾಂಚಾಲನಗರಕ್ಕೆ ಹೋಗಿ, ದ್ರೌಪದಿಯನ್ನು ವರಿಸಿರಿ. ಮುಂದೆ ಸುಖಿಗಳಾಗುತ್ತೀರಿ". ಎಂದು ಹೇಳಿ ಹೊರಟು ಹೋದರು. ಅವರ ಮಾರ್ಗದರ್ಶನದಂತೆ ಪಾಂಡವರು ಕುಂತಿಯೊಡನೆ ಪಾಂಚಾಲನಗರಕ್ಕೆ ಬಂದರು. ಅರ್ಜುನ, ಪಂಥದಲ್ಲಿ ದ್ರೌಪದಿಯನ್ನು ಗೆದ್ದನು. ಕುಂತಿಯ ಆಶೀರ್ವಚನದಂತೆ ಅವಳು ಐವರ ಪತ್ನಿಯಾಗ ಬೇಕಾಯಿತು. ದ್ರುಪದನಿಗೆ ಇದೊಂದು ಬಿಡಿಸಲಾರದ ಸಮಸ್ಯೆಯಾಯಿತು. ಇದು ದ್ವೈಪಾಯನರಿಗೆ ತಿಳಿದು, ಅವರು ಪಾಂಚಾಲ ನಗರಕ್ಕೆ ಬಂದರು. ದ್ರುಪದನಿಗೆ ಪಾಂಡವರ ಪೂರ್ವಜನ್ಮದ ವೃತ್ತಾಂತವನ್ನೂ, ಹಿಂದಿನ ಜನ್ಮದಲ್ಲಿ ದ್ರೌಪದಿ ಶಿವನಿಂದ ಪಡೆದ ವರಗಳ ವಿಷಯವನ್ನೂ ತಿಳಿಸಿ, ಈ ಜನ್ಮದಲ್ಲಿ ಅವಳು ಐವರ ಪತ್ನಿಯಾಗುವುದು ಶ್ರೇಯಸ್ಕರವೆಂದೂ, ಧರ್ಮಬಾಹಿರವಲ್ಲವೆಂದೂ ಹೇಳಿದರು. ಅನಂತರ ಪಾಂಡವರ–ದ್ರೌಪದಿಯ ವಿವಾಹ ವಿಧಿಪೂರ್ವಕ ನೆರವೇರಿತು.

ಧರ್ಮರಾಯನು ಇಂದ್ರಪ್ರಸ್ಥನಗರದಲ್ಲಿ ರಾಜಸೂಯ ಯಾಗವನ್ನು ಮಾಡಿದನು. ಆಗ ದ್ವೈಪಾಯನರು ಶಿಷ್ಯ ಸಮೇತ ಬಂದಿದ್ದರು. ಯಾಗದನಂತರ, ಯುಧಿಷ್ಠಿರ ಕೆಲವು ಅಪಶಕುನಗಳನ್ನೂ ದುಃಸ್ವಪ್ನಗಳನ್ನೂ ಕಂಡು, ಚಿಂತಾಕ್ರಾಂತನಾದನು. ಆಗ ದ್ವೈಪಾಯನರು ಅವನ ಬಳಿಗೆ ಬಂದು, ಇದರ ಬಗೆಗೆ ಚಿಂತಿಸಬಾರದೆಂದೂ ಇದು ವಿಧಿನಿಯಮದಂತೆ ನಡೆಯುವುದಾಗಿಯೂ, ಹೇಳಿ ಇವನ್ನು ಧೈರ್ಯದಿಂದ ಎದುರಿಸಬೇಕೆಂದು ತಿಳಿಸಿ ಸಮಾಧಾನ ಮಾಡಿದರು. ಅವರ ಮಾತಿನಿಂದ ಧರ್ಮರಾಜನಿಗೆ ಸಮಾಧಾನವುಂಟಾಗಿ, ರಾಜಕಾರ್ಯದಲ್ಲಿ ಪ್ರವೃತ್ತನಾದನು.

ಪಾಂಡವರು ವನವಾಸದಲ್ಲಿದ್ದ ಸಮಯ. ದುರ್ಯೋಧನ ಅವರನ್ನು ಸಂಹರಿಸಬೇಕೆಂದು ಸೈನ್ಯ ಸಮೇತ ಕಾಡಿಗೆ ಬಂದನು. ಇದನ್ನರಿತ ದ್ವೈಪಾಯನರು, ತಕ್ಷಣವೇ ಬಂದು, ಅವನನ್ನು ತಡೆದು, ಹಸ್ತಿನಾವತಿಗೆ ಹಿಂತಿರುಗುವಂತೆ ಮಾಡಿದರು. ಅಲ್ಲದೆ ಆಗಲೇ ನೇರವಾಗಿ ತಾವೂ ಹಸ್ತಿನಾವತಿಗೆ ಬಂದು ಧೃತರಾಷ್ಟ್ರವನ್ನು ಕಂಡು, ದುರ್ಯೋಧನನನ್ನು ಅಂಕಿತದಲ್ಲಿ ಇಟ್ಟುಕೊಳ್ಳಬೇಕೆಂದೂ, ಇಲ್ಲವಾದರೆ ಮುಂದೆ ದುರಂತವನ್ನು ಎದುರಿಸಬೇಕಾಗುತ್ತದೆ ಎಂದೂ ಎಚ್ಚರಿಸಿ ತಮ್ಮ ಆಶ್ರಮಕ್ಕೆ ಹೊರಟುಹೋದರು.

ದ್ವೈತವನದಲ್ಲಿದ್ದಾಗ ಒಮ್ಮೆ ಭೀಮ ಯುಧಿಷ್ಠಿರರಲ್ಲಿ ಅಜ್ಞಾತವಾಸದ ಬಗ್ಗೆ ಚರ್ಚೆ ನಡೆಯಿತು. "ನಾವು ಅಜ್ಞಾತವಾಸವನ್ನು ಸಫಲಗೊಳಿಸಲಾರೆವು. ನಮ್ಮಲ್ಲಿರುವ ಪರಾಕ್ರಮ ಧೈರ್ಯ–ಮುಂತಾದ ಗುಣಗಳನ್ನು ನಾವು ಎಷ್ಟೇ ಪ್ರಯತ್ನಿಸಿದರೂ, ಸುಪ್ತವಾಗಿಡಲು ಸಾಧ್ಯವಾಗುವುದಿಲ್ಲ. ಕೌರವರು ಗುಪ್ತಚಾರರ ಮೂಲಕ ನಮ್ಮನ್ನು

ಗೊತ್ತು ಹಚ್ಚುತ್ತಾರೆ. ಆದ್ದರಿಂದ ಅವರನ್ನು ಸಂಹರಿಸುವುದೇ ಸರಿ" ಎಂದು ಭೀಮ ವಾದಿಸುತ್ತಿದ್ದನು. ಧರ್ಮರಾಜ ಎಷ್ಟೋ ವಿಧದಲ್ಲಿ ಸಮಾಧಾನ ಮಾಡುತ್ತಿದ್ದನು. ಇದನ್ನರಿತ ದ್ವೈಪಾಯನರು, ಅಲ್ಲಿಗೆ ಬಂದರು. ಅವರಿಬ್ಬರಿಗೂ ತಿಳಿಯ ಹೇಳಿದರು. ಯುಧಿಷ್ಠಿರನಿಗೆ "ಪ್ರತಿಸ್ಮೃತಿ" ಎಂಬ ವಿದ್ಯೆಯನ್ನು ಉಪದೇಶಿಸಿದರು. ಅದನ್ನು ಅರ್ಜುನನಿಗೆ ಉಪದೇಶಿಸುವಂತೆ ಹೇಳಿ, ಅದರಿಂದ ಅವನು ತನ್ನ ಇಚ್ಛೆಯನ್ನು ಈಡೇರಿಸಿಕೊಳ್ಳುವಂತೆ ಸೂಚನೆ ಕೊಟ್ಟು, ಪಾಂಡವರು ಇನ್ನು ದ್ವೈತವನದಿಂದ ಕಾಮ್ಯಕ ವನಕ್ಕೆ ಹೋಗುವುದು ಶ್ರೇಯಸ್ಕರವೆಂದು ತಿಳಿಸಿದರು. ಅನಂತರ ಇನ್ನು ಮುಂದೆ ಅವರು ಹೇಗೆ ಇರಬೇಕು ಎನ್ನುವುದರ ಬಗ್ಗೆಯೂ ಮಾರ್ಗದರ್ಶನ ನೀಡಿ, ಆಶ್ರಮಕ್ಕೆ ಹೊರಟುಹೋದರು.

## ದಿವ್ಯದೃಷ್ಟಿ ಪ್ರದಾಯಕ :

ವನವಾಸ ಮತ್ತು ಅಜ್ಞಾತವಾಸ-ಇವುಗಳನ್ನು ಪೂರ್ಣಗೊಳಿಸಿದ, ಪಾಂಡವರು, ವಿರಾಟನಗರಕ್ಕೆ ಸಮೀಪದಲ್ಲಿ 'ಉಪಪ್ಲಾವ್ಯ' ಎಂಬ ನಗರವನ್ನು ಕಟ್ಟಿಕೊಂಡು, ವಾಸಮಾಡುತ್ತಿದ್ದರು. ಈ ವೇಳೆಗೆ ದುರ್ಯೋಧನನು, ಪಾಂಡವರ ವಿರುದ ಯುದ್ಧ ಮಾಡಲು ನಿಶ್ಚಯಿಸಿದ್ದನು. ಈ ವಿಷಯವನ್ನು ತಿಳಿಸಲು, ದುರ್ಯೋಧನ, ಸಂಜಯನನ್ನು ಉಪಪ್ಲಾವ್ಯ ನಗರಕ್ಕೆ ಕಳಿಸಿದನು. ಸಂಜಯನು ಬಂದು, ವಿಷಯವನ್ನು ತಿಳಿಸಿದನು. ಅವನು, ಕೃಷ್ಣಾರ್ಜುನರು ತಾವೂ ಯುದ್ಧ ಮಾಡಲು ಸಿದ್ಧರಾಗಿರುವಂತೆ ತಿಳಿಸಿದ ಸಂದೇಶವನ್ನು ತಂದು ದುರ್ಯೋಧನನಿಗೆ ತಿಳಿಸಿದನು. ಈ ವಿಷಯ ಧೃತರಾಷ್ಟ್ರನಿಗೆ ತಿಳಿಯಿತು. ಯುದ್ಧವಾದರೇ, ತನ್ನವರೆಲ್ಲ ನಾಶವಾಗುತ್ತಾರೆ ಎಂಬುದೂ ದೃಢವಾಯಿತು

ದಿಗ್ಭ್ರಾಂತನಾದ ಧೃತರಾಷ್ಟ್ರ ದ್ವೈಪಾಯನರಿಗೆ ಹೇಳಿಕಳಿಸಿದನು ಅವರು ಹಸ್ತಿನಾವತಿಗೆ ಬಂದರು. ಕೃಷ್ಣ ಸಂಧಾನ ವಿಫಲವಾಯಿತು. ಆಗ ಅವರು ಅಲ್ಲಿಯೇ ಇದ್ದರೂ, ಮಧ್ಯೆ ಪ್ರವೇಶಿಸಲಿಲ್ಲ. ದಿವ್ಯಜ್ಞಾನಿಗಳಾದ ಅವರಿಗೆ ಮುಂದೇನಾಗುವುದೆಂದು ಚೆನ್ನಾಗಿ ತಿಳಿದಿತ್ತು. ಕೌರವ ಪಾಂಡವರ ಯುದ್ಧ ಕುರುಕ್ಷೇತ್ರದಲ್ಲಿ ನಡೆಯುವುದೆಂದು ನಿಶ್ಚಿತವಾಯಿತು. ಧೃತರಾಷ್ಟ್ರನಿಗೆ ಯುದ್ಧದ ವಿವರಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ. ಇದನ್ನರಿತ ದ್ವೈಪಾನರು, ಸಂಜಯನಿಗೆ ದಿವ್ಯದೃಷ್ಟಿಯನ್ನಿತ್ತು ದೈನಂದಿನ ಯುದ್ಧದ ವಿವರಗಳನ್ನು ವರ್ಣಿಸುವಂತೆ ಹೇಳಿ, ಆಶ್ರಮಕ್ಕೆ ಹೊರಟು ಹೋದರು.

ಕುರುಕ್ಷೇತ್ರದಲ್ಲಿ ಕೌರವ-ಪಾಂಡವರ ಯುದ್ಧ ನಡೆಯಿತು. ಹದಿಮೂರನೆಯ ದಿನದ ಯುದ್ಧದಲ್ಲಿ ಆರು ಮಂದಿ ಮಹಾರಥರು ಒಟ್ಟಾಗಿ ಸೇರಿ, ಏಕಾಂಗಿಯಾದ ಅಭಿಮನ್ಯುವನ್ನು ಕೊಂದು ಹಾಕಿದರು. ಇದನ್ನು ತಿಳಿದ ಯುಧಿಷ್ಠಿರ ದುಃಖಿಸುತ್ತಾ ದಿಙ್ಮೂಢನಾಗಿ ಕುಳಿತು ಬಿಟ್ಟ. ತಪೋಬಲದಿಂದ ಇದನ್ನರಿತ ದ್ವೈಪಾಯನರು, ಧರ್ಮರಾಜನ ಬಿಡಾರಕ್ಕೆ ಬಂದರು. ಪುತ್ರಶೋಕದಿಂದ ವಿಮುಕ್ತನಾದ ಅಕಂಪನನ ಕಥೆಯನ್ನು ಹೇಳಿ, ಅಭಿಮನ್ಯುವು ವೀರಸ್ವರ್ಗವನ್ನು ಸೇರಿದ್ದಾನೆಂದೂ ಅವನಿಗಾಗಿ ದುಃಖಿಸಬಾರದೆಂದೂ ತಿಳಿಸಿ, ಅವನನ್ನು ಸಮಾಧಾನಗೊಳಿಸಿ, ಅವನಲ್ಲಿ ಪುನ ಯುದ್ಧೋತ್ಸಾಹವನ್ನು ತುಂಬಿ, ವನಕ್ಕೆ ಹಿಂತಿರುಗಿದರು.

## ಪಾಂಡವರಕ್ಷಕ :

ಹದಿನಾಲ್ಕನೆಯ ದಿನ ದ್ರೋಣರ ನಾಯಕತ್ವದಲ್ಲಿ ಕರ್ಣ ಘಟೋತ್ಕಚನನ್ನು ರಾತ್ರಿಯುದ್ಧದಲ್ಲಿ ಕೊಂದನು. ಘಟೋತ್ಕಚನ ಮರಣದಿಂದ ಧರ್ಮರಾಜ ದುಃಖಿತನಾದರೂ, ಕರ್ಣನನ್ನು ನೆನೆದು ಅವನ ಮೇಲೆ ಕೋಪ ಉಕ್ಕೇರಿ ಬಂದಿತು. ಕರ್ಣನನ್ನು ಕೊಲ್ಲಲು ಹೊರಟನು. ತಪೋಬಲದಿಂದ ಇದನ್ನರಿತ ದ್ವೈಪಾಯನರು, ಬೇಗನೆ ಬಂದು ಮಾರ್ಗ ಮಧ್ಯೆ ಯುಧಿಷ್ಠಿರನನ್ನು ತಡೆದು- "ಘಟೋತ್ಕಚನ ಮರಣ ವಿಧಿ ನಿಯಮದಂತೆ ನಡೆದಿದೆ. ಕರ್ಣನು, ಅರ್ಜುನನನ್ನು ಕೊಲ್ಲಲು ಮೀಸಲಿರಿಸಿದ್ದ ಶಕ್ತ್ಯಾಯುಧದಿಂದ ಇವನನ್ನು ಕೊಂದಿದ್ದಾನೆ. ಇನ್ನು ಕರ್ಣನು ಶಕ್ತ್ಯಾಯುಧವನ್ನು ಪ್ರಯೋಗಿಸುವಂತಿಲ್ಲ". ಎಂದು ಹೇಳಿ ಸಮಾಧಾನ ಮಾಡಿದನು. ಅನಂತರ ದ್ವೈಪಾಯನರು ಆಶ್ರಮಕ್ಕೆ ಹೊರಟು ಹೋದರು.

ದ್ರೋಣರ ಮರಣಾನಂತರ, ಅಶ್ವತ್ಥಾಮ ಅರ್ಜುನನ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದು ವ್ಯರ್ಥವಾಯಿತು. ಆಗ ಅವನು ನಿರಾಶೆಯಿಂದ ಯುದ್ಧರಂಗದಿಂದ ಓಡಿ ಹೋಗಲು ಇಚ್ಛಿಸಿದನು. ಇದನ್ನರಿತ ದ್ವೈಪಾಯನರು ಬಂದು, ನರ-ನಾರಾಯಣ ವೃತ್ತಾಂತವನ್ನು ತಿಳಿಸಿ, ಅಶ್ವತ್ಥಾಮನನ್ನು ಶಾಂತಗೊಳಿಸಿದರು. ಇದೇ ಸಮಯದಲ್ಲಿ ಅರ್ಜುನನಿಗೆ ಶಿವಮಹಿಮೆಯನ್ನು ಹೇಳಿ, ಅವನನ್ನೂ ಸಮಾಧಾನ ಮಾಡಿದರು.

ಉಪಪಾಂಡವರ ನಾಶದ ನಂತರ ಅಶ್ವತ್ಥಾಮ, ಅರ್ಜುನನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಇದನ್ನರಿತ ದ್ವೈಪಾಯನರು ತಡಮಾಡದೆ ಯುದ್ಧರಂಗಕ್ಕೆ ಬಂದು, ಇಬ್ಬರನ್ನೂ ಸಮಾಧಾನಗೊಳಿಸಿ, ತಮ್ಮ ಅಸ್ತ್ರಗಳನ್ನು ಉಪಸಂಹಾರ ಮಾಡುವಂತೆ ಹೇಳಿದರು. ಅರ್ಜುನನು ಬ್ರಹ್ಮಾಸ್ತ್ರವನ್ನು ಉಪಸಂಹಾರಮಾಡಿದನು. ಆದರೆ ಅಶ್ವತ್ಥಾಮನಿಂದ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡಲು ಆಗಲಿಲ್ಲ. ಅದು ಉತ್ತರೆಯ ಗರ್ಭದಲ್ಲಿದ್ದ ಶಿಶುವನ್ನು ಹತ್ಯ ಮಾಡಲು

(29ನೇ ಪುಟ ನೋಡಿ)



# ವೈಖಾನಸ ಮಹರ್ಷಿ

ವೈಖಾನಸೋ ವಿಖನಸೋ
ವಿಖನಾಶ್ಚ ವಿರಿಂಚನಃ

ಖನನ ಎಂದರೆ ಅಗೆಯುವುದು ಅನ್ವೇಷಣೆ ಎಂದರ್ಥ. ಇಲ್ಲಿ 'ಖನನಂ ತತ್ರ ಮೀಮಾಂಸಾ ಭಾವನಾಮುನಿಸೃಷ್ಟ್ಯೆಯೇ' ಎಂದರೆ, ಪೂರ್ವದಲ್ಲಿ ವಿಷ್ಣುವು ವೇದವೇದಾಂಗಗಳನ್ನೆಲ್ಲಾ ಹುಡುಕಿ ಮುನಿಯೊಬ್ಬನನ್ನು ಮನಸ್ಸಿನಿಂದಲೇ ಸೃಷ್ಟಿಸಿದನು. ಆದ್ದರಿಂದ ಆ ಋಷಿಯು 'ವಿಖನಸ' ಎಂಬ ಹೆಸರಿನವನಾದನು. ಆ ಋಷಿಯು

ಕುಶಾಸನೇ ಸಮಾಸೀನಂ
ಊರ್ಧ್ವಪುಂಡ್ರ ಪವಿತ್ರಕಂ
ಕಿರೀಟಹಾರಾಭರಣ
ಕುಂಡಲಾಂಗದ ಭೂಷಿತಂ
ಶಿಖಾಯಜ್ಞೋಪವಿತಾಭ್ಯಾಂ
ತ್ರಿದಂಡೇನ ವಿರಾಜಿತಂ

ಈ ರೀತಿಯಾಗಿ ಊರ್ಧ್ವ ಪುಂಡ್ರಗಳಿಂದ ವಿರಾಜನಾಗಿ ಪವಿತ್ರಗಳನ್ನು ಧರಿಸಿಕೊಂಡು ಕಿರೀಟ, ಹಾರ, ಕುಂಡಲಗಳಿಂದ ಅಲಂಕೃತನಾಗಿ, ಶಿಖೆಯನ್ನು ಬಿಟ್ಟುಕೊಂಡು, ಯಜ್ಞೋಪವೀತವನ್ನು ಧರಿಸಿಕೊಂಡು ಕೈಯಲ್ಲಿ ತ್ರಿದಂಡವನ್ನು ಹಿಡಿದುಕೊಂಡು ದೇದೀಪ್ಯಮಾನನಾಗಿ ಪ್ರಕಾಶಿಸಿದನು. ಹೀಗೆ ಹುಟ್ಟಿದ ಋಷಿಯ ಕಾಲಕ್ಕೆ ವೇದಗಳೆಲ್ಲಾ ಹಿಂದೇ ಆಗಿದ್ದವು.

ವೇದಾನಾಂ ವ್ಯಸನಾದರ್ವಾಕ್
ಪ್ರಾಗ್ರೂಪಂ ಮಿಳಿತಂತು ಯತ್
ತಾಂತು ವೈಖಾನಸೀಂ ಶಾಖಾ
ಇತಿ ವೇದವಿದೋ ವಿದುಃ

ಆಗ ವೇದಗಳು 'ವೈಖಾನಸ' ವೆಂಬ ಶಾಖೆಗೆ ಸೇರಿದವುಗಳಾಗಿದ್ದವು. ಈ ರೀತಿಯಾಗಿ ಹುಟ್ಟಿದ ವಿಖನಸರಿಂದ ವೈಖಾನಸವು ಸೃಷ್ಟಿಯಾಯಿತು. ಅದು ವಿಖನಸರ ಶಿಷ್ಯರಾದ ಮರೀಚ್ಯತ್ರಿ ಕಶ್ಯಪ ಭೃಗುಗಳಿಂದ ಇಂದಿನವರೆಗೂ ಬೆಳೆದು ಬಂದಿದೆ.

ಅನಂತರ ಮಹಾವಿಷ್ಣುವೇ ವೇದವ್ಯಾಸನಾಗಿ ಅವತರಿಸಿ ವೇದಗಳನ್ನು ವಿಭಾಗಿಸಿದನು. ಹಾಗೆ ಮೊದಲ ಭಾಗವಾದ ಅತ್ಯಂತ ಪ್ರಾಚೀನವಾದ ಋಗ್ವೇದದಲ್ಲಿ

ಧೇನುರ್ವಹಾಣಾ ಮದಿತಿ ಸ್ವರಾಣಾಂ
ಬ್ರಹ್ಮಾ ಋಭೂಣಾಂ ವಿಖನಾ ಮುನೀನಾಮ್

'ಋಷಿಗಳಲ್ಲಿ ವಿಖನನು' ಎಂದು ಋಗ್ವೇದವು ವಿಖನಸಾಚಾರ್ಯರ ಹೆಚ್ಚುಗಾರಿಕೆಯನ್ನು ಹೆಗಳಿದೆ.

ಅದೇ ಋಗ್ವೇದವೇ ಪವಸ್ವಂತಂ ವೈಖಾನಸಃ ಪವಸ್ವತೇ-ಎಂದೂ, ಕರ್ಣೋವಾಕೋ ವೈಖಾನಸಃ-ಎಂದೂ ಹೇಳಿದೆ.

ಹಾಗೇ ಯಜುರ್ವೇದದ ತೈತ್ತಿರೀಯಾರಣ್ಯಕದ ಮೊದಲನೇ ಪ್ರಶ್ನೆಯಲ್ಲಿ "ಯೇ ನಖಾಃ। ತೇ ವೈಖಾನಸಾಃ" ಎಂಬ ವಾಕ್ಯವಿದೆ.

ಹಾಗೇ ಸಾಮವೇದವು

'ವೈಖಾನಸಂ ಪೂರ್ವೇ ವಹನ್ ಸಾಮಭವತಿ' ಎಂದು ಹೊಗಳಿದೆ.

ಇದಲ್ಲದೇ ಸ್ಮೃತಿ ಪುರಾಣಗಳಲ್ಲಿಯೂ ವಿ ಖ ನ ಸ ಶಬ್ದವಿರುವುದನ್ನು ನೋಡಬಹುದು.

ಮಹಾಭಾರತದ ಕೃಷ್ಣ ಧರ್ಮರಾಜರ ಸಂವಾದದಲ್ಲಿ

ಕಥಂ ತ್ವಮರ್ಚನೀಯೋಸಿ
ಮೂರ್ತಯಃ ಕೇ ದೃಶಾಸ್ತುತೇ
ವೈಖಾನಸಾಃ ಕಥಂ ಬ್ರೂಯುಃ
ಕಥಂ ಪಾಂಚರಾತ್ರಿಕಾಃ

ಎಂಬುದಕ್ಕೆ ಕೃಷ್ಣನ ಉತ್ತರದಲ್ಲಿ

ಪುರುಷಂ ಚ ತತಃ ಸತ್ಯ
ಮಚ್ಯುತಂ ಚ ಯುಧಿಷ್ಠಿರ
ಅನಿರುದ್ಧಂ ಚ ಮಾಂ
ಪ್ರಾಹುರ್ವೈಖಾನಸವಿದೋ ಜನಾಃ

**ಎಸ್. ಶ್ರೀನಿಧಿ ವರದಾಚಾರ್**

ಎಂದು ವೈಖಾನಸರು ಅರ್ಚನೆಗಾಗಿ ಉಪಯೋಗಿಸುವ ಪಂಚಮೂರ್ತಿಗಳ ಪರಾಮರ್ಶೆ ಇದೆ.

ವೈಖಾನಸ ಶಬ್ದವು ಪರಮಾತ್ಮ ವಾಚಕವಾಗಿಯೂ ಸಹ ಉಪಯೋಗಿಸಲ್ಪಟ್ಟಿದೆ.

ಯತ್ತಸ್ಮಿನ್ನುಪಲಭ್ಯಂತು
ತತ್ತೇಜಸ್ತ್ರಯೀಮಯಮ್
ತಸ್ವೈಖಾನಃ ಪರಂ ಬ್ರಹ್ಮ
ಇತಿ ವೇದ ವಿದೋ ವಿದುಃ

ಇದೇ ಮಹಾಭಾರತದ ಅನುಶಾಸನ ಪರ್ವದ ವಿಷ್ಣು ಸಹಸ್ರನಾಮದಲ್ಲಿ

"ವೈಖಾನಸ್ಸಾಮಗಾಯನಃ" ಎಂದು ಉಪಯೋಗಿಸಿರುವುದು ಅತ್ಯಂತ ಹೆಚ್ಚಿನ ಪ್ರಮಾಣವಾಗಿದೆ.

ಹಾಗೆಯೇ ಆದಿಕಾವ್ಯವೆಂದು ಪ್ರಸಿದ್ಧವಾಗಿರುವ ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮನು ದಂಡಕಾರಣ್ಯ ಪ್ರವೇಶ ಮಾಡಿದಾಗ ಅವನನ್ನು ನೋಡಲು ಬಂದ ಋಷಿಗಳ ಪೈಕಿ ವೈಖಾನಸರ ಹೆಸರನ್ನು ಎತ್ತಿದೆ.

ವೈಖಾನಸಾ ವಾಲಖಿಲ್ಯಾಃ
ಸಂಪ್ರಕ್ಷಾಲಾ ಮರೀಚಿಪಾಃ

ಎಂದಿದೆ. ಹಾಗೇ ಇನ್ನೊಂದು ಶ್ಲೋಕದಲ್ಲಿ

ಅಜ್ಯೈರ್ವೈಖಾನ ಸೈರ್ಮಾಷ್ಯೈ
ರ್ವಾಲಖಿಲ್ಯೈರ್ಮರೀಚಿಪೈಃ

ಎಂಬಲ್ಲೂ

ತತೋ ವೈಖಾನಸಂ ಮಾರ್ಗ
ಮಾಸ್ಥಿತಃ ಸಹ ಲಕ್ಷ್ಮಣಃ

ಎಂಬಲ್ಲೂ ವೈಖಾನಸ ಶಬ್ದಗಳ ಪರಾಮರ್ಶೆ ಇದೆ.

ಹಾಗೆಯೇ ಶ್ರೀಮದ್ಭಾಗವತದ ಹತ್ತನೇ ಸ್ಕಂದದ ಗೋಪೀ ಗೀತೆಯಲ್ಲಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | „ 4–30 ರಿಂದ 5–00 | „ 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | „ 5–45 ರಿಂದ 7–00 | „ 6–30 ರಿಂದ 11–30 |
| ಸಳ್ಳಿಂಪು | „ 7–00 ರಿಂದ 7–30 | |
| ಅಭಿಷೇಕ | „ 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನತಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/-) | |
| ರಾತ್ರಿ ಗಂಟೆ | ರಾತ್ರಿ ?–00 ರಿಂದ 8–30 | ರಾತ್ರಿ –00 ರಿಂದ ?–30 |
| ಸರ್ವದರ್ಶನ | — | „ 6–30 ರಿಂದ 9–15 |
| ಏಕಾಂತಸೇವೆ | „ 8–30 ರಿಂದ 9–00 | „ 9–15 ರಿಂದ 9–30 |

**ಪೇಷ್ಕಾರ್.**

ವಿಖನ ಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ತ್ವತಾಂ
ಕುಲೇ

ಎಂದು ಗೋಪಿಯರು ಶ್ರೀಕೃಷ್ಣನನ್ನು ಸ್ತುತಿಸಿದ್ದಾರೆ. ಅತ್ರಿ ಸಂಹಿತೆ ಎಂ ಗ್ರಂಥದಲ್ಲಿ

ಮಹಾಭೂತೇನ ಏನೇದಂ
ವ್ಯಾಪ್ತಂ ವಿಖನಸಾ ಜಗತ್
ತಮೇವ ಗಚ್ಛ ಜಗತ್ಕಾರಣ ಮಚ್ಯುತ

ಎಂದು ಪ್ರಸ್ತಾಪಿಸಿ ವಿಖನಸರ ಹೆಸರನ್ನು ಉದ್ಧರಿಸಿದೆ. ಹಾಗೆಯೇ ಇತ್ತೀಚಿನ ಪುಸ್ತ ಗಳಾದ ಚಕ್ರವರ್ತೀ ಗೋಪಾಲಾಚಾರ್ಯ ಶ್ರೀಶ್ವೇತಾದ್ರೀಶ ಸ್ತೋತ್ರಮಾಲಿಕಾ ಮತ್ತು ಶ್ರೀವೆಂಕಟೇಶ್ವರ ಸ್ತೋತ್ರಮಾಲಿಕಾ ಇವು ಳಲ್ಲಿ ಭಗವಂತನನ್ನು ವೈಖಾನಸ ಶಬ್ದದಿಂ ಸ್ತುತಿಸಿದ್ದಾರೆ.

ಇದಲ್ಲದೇ ಶ್ರೀವೆಂಕಟೇಶ್ವರ ಅಷ್ಟೋತ್ತ ರದಲ್ಲೂ 'ಶ್ರೀವೈಖಾನಸ ಮುನಿಶ್ರೇಷ್ಠ ಪೂಜಿತಾಯ' ಎಂದಿದೆ.

ಲಕ್ಷ್ಮೀವಿಶಿಷ್ಟಾದ್ವೈತವಾದೀ ಚ
ವಿಖನೋ ಮುನಿಸತ್ತಮಃ

ಎಂಬಂತೆ ವಿಖನಸರು ಲಕ್ಷ್ಮೀ ವಿಶಿಷ್ಟಾದ್ವೈ ತವಾದಿಗಳು. ಆಚಾರ್ಯರು ಲಕ್ಷ್ಮೀ ಸಮೇ ನಾದ ಮಹಾವಿಷ್ಣುವನ್ನು ಪೂಜಿಸಬೇಕೆಂದು ಹೇಳುತ್ತಾರೆ.

ಶ್ರೀವೈಖಾನಸ ಸ್ಮಾರ್ತ ಸೂತ್ರದಲ್ಲಿ ಶ್ರೀ ಮದ್ವಿಖನಸಾಚಾರ್ಯರು

ವಿಷ್ಣೋರ್ನಿತ್ಯಾರ್ಚಾ
ಸರ್ವದೇವಾರ್ಚನಾಭವತಿ
ಅಗ್ನಿರ್ವೈ ದೇವಾನಾಮವಮೋ
ವಿಷ್ಣುಃ ಪರಮಃ ತದನ್ತರೇಣ ಸರ್ವಾ
ಅನ್ಯಾ ದೇವತಾ ಇತಿ ಬ್ರಾಹ್ಮಣಂ

ಎಂದು ಪ್ರಾರಂಭಿಸಿ

ತಂ ಯಜ್ಞ ಪುರುಷಂ
ಧ್ಯಾಯನ್ ಪುರುಷಸೂಕ್ತೇನ
ಸಂಸ್ತೂಯ ಪ್ರಣಾಮಂ
ಕುರ್ಯಾತ್ ಯಜ್ಞೇಷು

ವಿಹೀನಂ ತತ್ಸಂಪೂರ್ಣಂ
ಭವತೀತಿ ಶ್ರುತಿರ್ದ್ವಿಜಾತಿ
ರತಂದ್ರಿತೋ ನಿತ್ಯಂ
ಗೃಹೇ ದೇವಾಯತನೇ ವಾ
ಭಕ್ತ್ಯಾ ಭಗವಂತಂ
ಶ್ರೀಮನ್ನಾರಾಯಣಂ ಅರ್ಚಯೇತ್
ತದ್ವಿಷ್ಣೋಃ ಪರಮಂ ಪದಂ
ಗಚ್ಛತೀತಿ ವಿಜ್ಞಾಯತೇ

ಎಂದು ಉಪಸಂಹಾರ ಮಾಡಿರುತ್ತಾರೆ.

ಇದರ ಅರ್ಥವೇನೆಂದರೆ ದೇವತೆಗಳಲ್ಲಿ ಅಗ್ನಿಯೇ ಕಿರಿಯವನು. ವಿಷ್ಣುವೇ ಪರಮನು. ಇವನಲ್ಲೇ ಉಳಿದ ದೇವತೆಗಳೂ ಒಂದಾಗಿರುವರು. ಆದ್ದರಿಂದ ವಿಷ್ಣುವಿನ ನಿತ್ಯಾರ್ಚನೆಯು ಸರ್ವದೇವಾರ್ಚನೆಯಾಗುವುದು ಎಂದು ಬ್ರಾಹ್ಮಣವು. ಆದ್ದರಿಂದ ಈ ಪರಮಾತ್ಮನನ್ನು ಧ್ಯಾನಮಾಡುತ್ತಾ ಈ ಯಜ್ಞಪುರುಷನನ್ನು ಪುರುಷ ಸೂಕ್ತದಿಂದ ಸ್ತುತಿಸಿ ನಮಸ್ಕಾರಮಾಡಬೇಕು, ಯಜ್ಞಗಳಲ್ಲಿ ಬಿಟ್ಟುಹೋದದ್ದು ಇದರಿಂದ ಪೂರ್ಣವಾಗುವುದು ಎಂದು ಶ್ರುತಿಯು. ಆದ್ದರಿಂದ ಬ್ರಾಹ್ಮಣನು ಬೇಸರಿಕೆ ಇಲ್ಲದೆ ಮನೆಯಲ್ಲಾಗಲೀ ದೇವಾಲಯದಲ್ಲಾಗಲೀ ನಿತ್ಯವೂ ಭಕ್ತಿಯಿಂದ ಭಗವಂತನಾದ ನಾರಾಯಣನನ್ನು ಅರ್ಚನೆ ಮಾಡಬೇಕು, ಇದರಿಂದ ವಿಷ್ಣುವಿನ ಪರಮಪದವನ್ನು ಹೊಂದುತ್ತಾನೆ ಎಂದು ತಿಳಿಸುತ್ತಾರೆ.

ಅಲ್ಲದೆ ಪರಾಶರರು, ಅಂಗೀರಸರು, ಪುಲಸ್ತ್ಯರು, ಶುಕಮಹರ್ಷಿಗಳು, ಮರೀಚಿಗಳು ಮುಂತಾದ ಅನೇಕಾನೇಕ ಮಹರ್ಷಿಗಳು ವಿಷ್ಣುವಿನ ಅರ್ಚನೆಯೇ ಪರಮವೆಂದು ಹೇಳಿದ್ದಾರೆ.

ಕೆಲವು ಆರ್ಷವಚನಗಳು–
ಅಗ್ನಿಹೋತ್ರಾಶ್ಚ ವೇದಾಶ್ಚ
ತಥಾ ಯಜ್ಞಾಃ ಸದಕ್ಷಿಣಾಃ
ಹರೇರ್ನಿತ್ಯಾರ್ಚನ ಸ್ಯೈತೇ
ಕೋಟ್ಯಂಶೇನಾಪಿ ನೋ ಸಮಾಃ
ನ ವಿಷ್ಣ್ವಾರಾಧನಾತ್ಪುಣ್ಯಂ
ವಿದ್ಯತೇ ಕರ್ಮ ವೈದಿಕಂ
ಸರ್ವೇಷಾಮೇವ ಧರ್ಮಾಣಾ
ಮುತ್ತಮೋ ವೈಷ್ಣವೋವಿಧಿಃ
–ಎಂದಿದೆ.

ಅಂದರೆ, ಅಗ್ನಿಹೋತ್ರಗಳಾಗಲೀ ವೇದಗಳ ಅಧ್ಯಯನವಾಗಲೀ, ಹಾಗೆಯೇ ದಕ್ಷಿಣಾ ಸಹಿತವಾದ ಯಜ್ಞಗಳಾಗಲಿ ಹರಿಯ ನಿತ್ಯಾರ್ಚನೆಯ ಕರ್ಮಕ್ಕೆ ಕೋಟಿಯಲ್ಲಿ ಒಂದು ಅಂಶವೂ ಸಮನಾಗಲಾರವು. ವಿಷ್ಣುವಿನ ಆರಾಧನೆಗಿಂತ ಹೆಚ್ಚಿನ ಪುಣ್ಯವಿಲ್ಲ. ಧರ್ಮಗಳಲ್ಲೆಲ್ಲ ವೈಷ್ಣವಧರ್ಮವೇ ಹೆಚ್ಚಿನದು ಎಂದು ಹೇಳಿದೆ

ಆಚಾರ್ಯರು ವಿಷ್ಣುವಿನ ಎರಡು ವಿಧವಾದ ಪೂಜೆಯನ್ನು ಪ್ರತಿಪಾದಿಸಿದ್ದಾರೆ. ಒಂದು ಸಾಕಾರ ಪೂಜೆ. ಇನ್ನೊಂದು ನಿರಾಕಾರ ಪೂಜೆ.

ಸಾಕಾರಂಚ ನಿರಾಕಾರಂ
ಭವೇದ್ ಆರಾಧನಂ ದ್ವಿಧಾ
ಅಗ್ನಾಯಜೋ ನಿರಾಕಾರಂ
ಸಾಕಾರಂ ಬಿಂಬ ಪೂಜನಂ

ಈ ಎರಡು ವಿಧವಾದ ಪೂಜೆಗಳಲ್ಲಿ ಸಾಕಾರ ಪೂಜೆ ಶ್ರೇಷ್ಠವೆಂದು ಹೇಳಿದ್ದಾರೆ.

ವಿಖನಸ ಮಹರ್ಷಿಗಳು ರಚಿಸಿದ್ದ ಒಂದೂವರೆ ಕೋಟಿ ಸೂತ್ರಗಳನ್ನು ಭೃಗ್ವತ್ರಿ ಮರೀಚಿ ಕಶ್ಯಪರು ನಾಲ್ಕು ಲಕ್ಷಗ್ರಂಥಗಳಿಂದ ಸಂಗ್ರಹಿಸಿದ್ದಾರೆ, ಆದರೆ ಇವೆಷ್ಟೂ ಈ ಹೊತ್ತಿಗೆ ಲಭ್ಯವಿಲ್ಲದಿರುವುದು ದುರದೃಷ್ಟಕರ. ಸಿಕ್ಕಿರುವ ಸ್ವಲ್ಪದರಲ್ಲಿಯೇ ನಿಷೇಕಾದಿ ಸಂಸ್ಕಾರಗಳನ್ನೂ, ವೈಖಾನಸ ಸೂತ್ರಗಳನ್ನೂ, ಅನೇಕ ವಿಧವಾದ ಅರ್ಚನಾವಿಧಾನವನ್ನೂ ವಿವರಿಸಿರುವುದನ್ನು ನೋಡಬಹುದು

ಈ ರೀತಿಯಾಗಿ ವಿಖನಸರಾದಿಯಾಗಿ ಭೃಗ್ವತ್ರಿ ಮರೀಚಿ ಕಶ್ಯಪರ ಮೂಲಕ ಹುಟ್ಟಿದ ವೈಖಾನಸರು. ಇದನ್ನನುಸರಿಸುವವರು ಗರ್ಭವೈಷ್ಣವರೆನಿಸಿಕೊಂಡು ವಿಷ್ಣುವಿಗೆ ಅತ್ಯಂತ ಪ್ರಿಯರಾಗಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಭೂವೈಕುಂಠವೆಂದು ಪ್ರಸಿದ್ಧವಾದ ತಿರುಪತಿಯಲ್ಲಿ ಸ್ವಯಂಭುವಾದ ಶ್ರೀ ಮಹಾವಿಷ್ಣುವನ್ನು ಮುಟ್ಟಿ ಪೂಜೆಮಾಡುವ ಭಾಗ್ಯವು ವೈಖಾನಸರದಾಗಿದೆ. ಅವನೇ ಹೇಳಿರುವಂತೆ 'ಆತ್ಮಾವೈ ಪುತ್ರ ನಾಮಾಸಿ' ಎಂದರೆ ನನ್ನ ಆತ್ಮ ಸಂಜಾತರು, ವೈಖಾನಸರು, ಎಂದಿದ್ದಾನೆ.

ಶ್ರೀ ಲಕ್ಷ್ಮೀವಲ್ಲಭ ಸಂಕಲ್ಪ
ವಲ್ಲಭಾಯ ಮಹಾತ್ಮನೇ
ಶ್ರೀಮದ್ವಿಖನಸೇ ಭೂಯಾತ್
ನಿತ್ಯಶ್ರೀಃ ನಿತ್ಯ ಮಂಗಳಮ್

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100-00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70-00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ: | | |
| ಎ ವಿಭಾಗ– ಗೈಸರ್‌ನೊಂದಿಗೆ | ರೂ | 20-00 |
| ಬಿ ವಿಭಾಗ– ಗೈಸರ್ ರಹಿತ | ರೂ | 12-00 |
| ವಿ.ವಿ.ಸಿ. ಹಾಗೂ ಎಂ.ಬಿ.ಸಿ 31 ಹಾಗೂ 26 | ರೂ | 70-00 |
| ಎಂ.ಬಿ ಸಿ. ಎ–ಭಾಗ ಗೈಸರ್‌ನೊಂದಿಗೆ | ರೂ | 20-00 |
| ಎಂ.ಬಿ.ಸಿ. ಬಿ–ಭಾಗ ಗೈಸರ್ ರಹಿತ | ರೂ | 12-00 |
| ಟಿ.ಬಿ. ಸೂಟ್‌ಗಳು ಗೈಸರ್‌ನೊಂದಿಗೆ | ರೂ | 15-00 |
| ಎ.ಟಿ.ಸಿ. ಸೂಟ್‌ಗಳು ಗೈಸರ್ ರಹಿತ | ರೂ | 10-00 |
| ಎ.ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30-00 |
| ಬಿ–ಭಾಗ | ರೂ | 30-00 |
| ಎಸ್.ಎಂ.ಸಿ., ಎಸ್.ಎನ್.ಸಿ., ಎ.ಎಸ್.ಸಿ, | | |
| ಜಿ.ಎನ್.ಸಿ, ಎಚ್.ವಿ ಸಿ.: | | |
| ಎ–ಭಾಗ ಗೈಸರ್ ರಹಿತ | ರೂ | 12-00 |
| ಬಿ–ಭಾಗ " | ರೂ | 12-00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗೈಸರ್ ನೊಡನೆ | ರೂ | 25-00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗೈಸರ್‌ರಹಿತ | ರೂ | 12-00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ | | |
| (ಗೈಸರ್‌ನೊಡನೆ) | ರೂ | 50-00 |
| " " ಸಣ್ಣ ಸೂಟ್ | | |
| (ಗೈಸರ್ ರಹಿತ) | ರೂ | 25-00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70-00 |
| " " ಮೂಲೆ ಸೂಟ್ | ರೂ | 60-00 |
| " " ಇತರೆ | ರೂ | 50-00 |
| ಎಸ್.ಜಿ. ಅತಿಥಿಗೃಹ I ಹಾಗೂ II | | |
| ಮೂಲೆ ಸೂಟ್ | ರೂ | 60-00 |
| ಇತರೆ | ರೂ | 50-00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250-00 |
| ಎಸ್. ಪಿ. ಅತಿಥಿಗೃಹ: | | |
| ಮಾಸ್ಟರ್ ಸೂಟ್ ಸಂ. 9 ಹಾಗೂ | | |
| ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750-00 |
| ಮಾಸ್ಟರ್ ಸೂಟ್ ಸಂ. 1 | | |
| ಕಿರಿಯ ಸೂಟ್ ಸಂ. 6 " | | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750-00 |
| ಶ್ರೀನಿಕೇತನ (ಪ್ರತಿ ಸೂಟ್), | | |
| ಎಸ್.ಪಿ. ನಗರ್ ಅತಿಥಿಗೃಹ ಸಂ.-IV | ರೂ | 250-00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250-00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250-00 |
| ಗೋಕುಲಂ (ಎ. ಸಿ.) | ರೂ | 500-00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75-00 |
| ರೂಯಾ 248 | ರೂ | 100-00 |
| ಗೋಗಿನೇನಿ 226 | ರೂ | 100-00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜಿ | ರೂ | 125-00 |
| ಎ. ಟಿ. ಸಿ.– 9 | ರೂ | 100-00 |
| ಟಿ. ಬಿ. ಸಿ. 136, 152, 71 | ರೂ | 75-00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500-00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000-00 |
| ಹೊಸದಾಗಿ ನಿರ್ಮಿತವಾದುವು: | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60-00 |
| ಮೊದಲ ಅಂತಸ್ತಿನ | | |
| ಕಾಟೇಜುಗಳು ಅರ್ಧ ಕಾಟೇಜು | ರೂ | 30-00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50-00 |
| ರಾಮಬಗೀಚಾ ಅತಿಥಿಗೃಹ " | ರೂ | 50-00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

**ಉಪಕಾರ್ಯನಿರ್ವಹಣಾಧಿಕಾರಿ** (ಸ್ವಾಗತ-II)
ತಿ. ತಿ. ದೇವಸ್ಥಾನಗಳು, ತಿರುಮಲೆ.

# ಕರ್ಮಯೋಗ

ಮೂಕಂ ಕರೋತಿ ವಾಚಾಲಂ
ಪಂಗುಂ ಲಂಘಯತೇ ಗಿರಿಮ್ ।
ಯತ್ಕೃಪಾ ತಮಹಂ ವಂದೇ
ಕೃಷ್ಣಂ ವಂದೇ ಜಗದ್ಗುರುಮ್ ॥

* * * *

ಗೀತಾ ಸುಗೀತಾ ಕರ್ತವ್ಯಾ
ಕಿಮನ್ಯೈಃ ಶಾಸ್ತ್ರ ವಿಸ್ತರೈಃ ।
ಯಾ ಸ್ವಯಂ ಪದ್ಮನಾಭಸ್ಯ
ಮುಖ ಪದ್ಮಾದ್ವಿನಿಃಸೃತಾ ॥

ಶ್ರೀಮದ್ಭಗವದ್ಗೀತೆ ಅದ್ವಿತೀಯಗ್ರಂಥ. ವ್ಯಾಸಮಹರ್ಷಿಗಳಿಂದ ರಚಿತವಾದ ಶ್ರೀಮನ್ಮಹಾಭಾರತದ ಒಂದು ಭಾಗ ವೇದ, ಉಪನಿಷತ್ತುಗಳ ಸಾರವಾಗಿದೆ. ಇದನ್ನು ಹೇಳಿದಂತಹ ಸಂದರ್ಭವೂ ತುಂಬಾ ಅರ್ಥಪೂರ್ಣವಾದುದು. ಮಹಾಭಾರತ ಯುದ್ಧದ ಪ್ರಾರಂಭದ ದಿನ ಸೂರ್ಯೋದಯಕ್ಕೆ ಮುಂಚೆ ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಎರಡೂ ಪಕ್ಷದ ಸೇನೆಗಳೂ ಎದುರುಬದುರಾಗಿ ನಿಂತಿವೆ. ಸೇನಾಪತಿಗಳು ಯುದ್ಧದ ಸಿದ್ಧತೆಯನ್ನು ನಡೆಸುತ್ತಿದ್ದಾರೆ. ಮೂರು ಲೋಕದ ಗಂಡನಾದ ಪಾರ್ಥ ತನ್ನ ಸಾರಥಿಯನ್ನುದ್ದೇಶಿಸಿ, ತನ್ನ ವೈರಿ ಸೈನಿಕರು ಎಲ್ಲರೂ ಸರಿಯಾಗಿ ಕಾಣುವಂಥ ಸ್ಥಳದಲ್ಲಿ ತನ್ನ ರಥವನ್ನು ಕೊಂಡುಹೋಗಿ ನಿಲ್ಲಿಸೆಂದು ಹೇಳಿ ತನ್ನ ಯುದ್ಧೋತ್ಸಾಹವನ್ನು ತೋರಿಸುತ್ತಾನೆ. ಕೃಷ್ಣನು ರಥವನ್ನು ನಡೆಸುತ್ತಾನೆ. ರಣರಂಗಕ್ಕೆ ಬಂದು ನಿಂತಿದೆ ರಥ.

ಮುರವಿಜಯ ನಿಜ ಪಾಂಚ ಜನ್ಯವ
ಇರದೆ ಫಲುಗುಣ ದೇವದತ್ತ
ಸ್ಫುರಿತ ರವವನು ರಚಿಸಿದನು
ಮೂಲೋಕ ಮೈಮರೆಯೆ
(ಕುಮಾರವ್ಯಾಸ ಭಾರತ)

ಶಂಖನಾದವು ಭೂಲೋಕವನ್ನೇ ಅಡರಿತು, ಆದರೆ ವೈರಿ ಸೈನ್ಯದ ಮೇಲೆ ದೃಷ್ಟಿಯನ್ನು ಹಾಯಿಸಿದ ಅರ್ಜುನ ಕಳೆಗುಂದಿ, ಬಸವಳಿದು, ಗಾಂಡೀವವನ್ನು ನೆಲದ ಮೇಲಿಟ್ಟು ಚಿಂತಾಕ್ರಾಂತನಾಗಿದ್ದಾನೆ. ದಿವ್ಯ ಜ್ಞಾನಿಯಾದ ಪರಮಾತ್ಮ ಅರ್ಜುನನ ಅಂತರ್ಯವನ್ನು ತಿಳಿದು,

ಕ್ಲೈಬ್ಯಂ ಮಾ ಸ್ಮಗಮಃ
ಪಾರ್ಥ ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಂ ಹೃದಯ ದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ ॥

"ಅರ್ಜುನಾ, ಷಂಡನ ಹಾಗೆ ವರ್ತಿಸಬೇಡ ಏಳು! ಎದ್ದೇಳು! ಈ ನಿನ್ನ ಸತ್ತವರಿಗಾಗಿ ಅತ್ತರೆ, ಅತ್ತವರೇನು ಸಾಯರೇ? ಸಾವಿನ ಭ್ರಮೆಯನ್ನು ಕಳೆ. ನೀನು ಮಾಡುವ ಕಾರ್ಯ ಯಾವುದು? ಯಾವ ಸ್ಥಾನದಲ್ಲಿ ನಿಂತು ನೀನು ಮಾಡಬೇಕಾದ ಕರ್ತವ್ಯವೇನು? ಎನುವುದನ್ನು ತಿಳಿ. ಸತ್ಯದ ಮಾರ್ಗವನ್ನು ಹಿಡಿ!" ಎಂದು ಹೇಳಿ ಅರ್ಜುನನು ಮಾಡಬೇಕಾದ ಕರ್ಮದ ಬಗ್ಗೆ, ಕರ್ತವ್ಯದ ಬಗ್ಗೆ 'ಕರ್ಮಯೋಗ'ದ ಬಗ್ಗೆ ತಿಳಿಸುತ್ತಾನೆ.

ಎಲ್ಲಾ ಉಪನಿಷತ್ತುಗಳೇ ಗೋವುಗಳು. ಶ್ರೀಕೃಷ್ಣನೇ ಗೋಪಾಲ. ಗೀತಾಮೃತವೇ ಹಾಲಾದರೆ, ಕರ್ಮಯೋಗವು ಇದರ ನವನೀತ. ಇಲ್ಲಿ ಅರ್ಜುನನೆಂದರೆ ದ್ವಾಪರದ ಅರ್ಜುನ ಮಾತ್ರವಲ್ಲ, ಸಂಸಾರದ ರಣರಂಗದಲ್ಲಿ ಭ್ರಾಂತರಾದ ನಾವೆಲ್ಲರೂ ಒಬ್ಬೊಬ್ಬ ಅರ್ಜುನರಾಗಿದ್ದೇವೆ. ಮನಸ್ಸು ಮತ್ತು ಸಂಸಾರಗಳಲ್ಲಿ ನಡೆಯುವ ಯುದ್ಧ ಮಹಾಭಾರತಕ್ಕಿಂತ ಮಿಗಿಲಾದುದು. ಈ ಕರ್ಮಯೋಗವು "ಬಾಳು ಬೆದರುವುದಕ್ಕಲ್ಲ, ಅನುಭವಿಸಿ ಎಮರಿಸುವುದಕ್ಕೆ" ಎಂಬ ಕರ್ಮತತ್ತ್ವವನ್ನು ಹೊಂದಿದೆ. ಜೀವನದ ರಹಸ್ಯ ಹಾಗೂ ಸೂಕ್ಷ್ಮತೆಯನ್ನು ಸಹಜವಾಗಿ ಹೇಳುವ ತತ್ತ್ವಶಾಸ್ತ್ರವಿದು. ನಿತ್ಯ ಲೌಕಿಕ ಜೀವನದ ಕೈಪಿಡಿ, ಕೈಗನ್ನಡಿ ಇದು. ಇದು ಎಷ್ಟರಮಟ್ಟಿಗೆ ತತ್ತ್ವಶಾಸ್ತ್ರವೋ ಅಷ್ಟೇ ಸಮಾಜ ಶಾಸ್ತ್ರವೂ, ಮನಃಶಾಸ್ತ್ರವೂ ಹೌದು. 'ತಿರುಪತಿ' ಎಂದಾಕ್ಷಣ ಶ್ರೀ ವೆಂಕಟೇಶನ ನೆನಪು ಹೇಗಾಗುವುದೋ ಹಾಗೆಯೇ 'ಭಗವದ್ಗೀತೆ' ಯೆಂದಾಗ ಕರ್ಮಯೋಗದ ನೆನಪಾಗಲೇ ಬೇಕು. ಇದರ ಸೂತ್ರದಲ್ಲಿಯೇ ವೇದ, ಉಪನಿಷತ್ತುಗಳ ತತ್ತ್ವ ಸರಣಿಯನ್ನು ಹೆಣೆದಿದ್ದಾನೆ ಶ್ರೀಕೃಷ್ಣ.

**ಕರ್ಮವೆಂದರೇನು?**

ಕರ್ಮವೆಂದರೆ ಕ್ರಿಯೆ, ಚಲನೆ...... ಇತ್ಯಾದಿ. ಭಗವದ್ಗೀತೆಯಲ್ಲೇ ' ಹೇಳಿದೆ



**ಶ್ರೀ ಸಿದ್ಧಾಪುರ ವಾಸುದೇವ ಭಟ್**

ನಹಿಕಶ್ಚಿತ್ ಕ್ಷಣಮಪಿ
ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ
ಸರ್ವಃ ಪ್ರಕೃತಿಜೈರ್ಗುಣೈಃ ।

ಕರ್ಮಭೂಮಿಯಲ್ಲಿ ಹುಟ್ಟಿದ ಪ್ರತಿಯೊಂ ಜೀವಿಯೂ ಕರ್ಮ ಮಾಡಲೇ ಬೇ ಕರ್ಮವನ್ನು ಮಾಡದೇ ಹಿಂದು ನಿಮಿಷ ಇರಲಸಾಧ್ಯ. ಪ್ರತಿಯೊಂದು ಜೀವಿಯ ಮೂರುವಿಧವಾಗಿ ಕರ್ಮವನ್ನು ಮಾ ತ್ತಿರುತ್ತದೆ. ಶಾರೀರಿಕವಾಗಿ ಕ್ರಿಯೆ, ಮ ಸಿಕವಾಗಿ ಭಾವನೆ, ಬೌದ್ಧಿಕವಾಗಿ ವಿಚಾ ಇದು ಗಡಿಯಾರದ ಮುಳ್ಳಿನಂತೆ ಸತತವ ನಡೆಯುತ್ತಿರುತ್ತದೆ. ಯೋಗವೆಂದರೇನು?

ಪಾಣಿನಿ ಹೇಳುತ್ತಾನೆ, (1) "ಯೋ ಚಿತ್ತವೃತ್ತಿಃ ನಿರೋಧಃ" – ಮನಸ್ಸನ ನಿರೋಧಿಸುವುದೇ ಯೋಗ. (2) ಸಮತ್ವ ಯೋಗಮುಚ್ಯತೇ"–ಕೈಗೊಂಡ ಕೆಲಸವನ ಸಮರ್ಪಕವಾಗಿ ಮಾಡುವುದೇ ಯೋ (3) "ಯೋಗಃ ಕರ್ಮಸುಕೌಶಲಂ" ಕಾರ್ಯದಲ್ಲಿ ಚತುರತೆಯೇ ಯೋಗ–ಎಂ ಹೇಳುತ್ತಾನೆ ಕೃಷ್ಣ. ಮನಃ ಶಾಸ್ತ್ರ ಮೂಲಕ 'ಅತಿ ಸರ್ವತ್ರವರ್ಜಯೇತ್" ಅತಿಯಾಗಿರುವುದನ್ನು ನಡೆಸದಿರುವು ಯೋಗ. ಅಂದರೆ ಕರ್ಮವನ್ನು ಮಾಡುತ್ತ ಇದ್ದು ಅದರ ಸಂಗವನ್ನು ತ್ಯಜಿಸುವುದು.

ಬಸವಣ್ಣನವರು ಹಿಂದು ಕಡೆ,

ಮಾಡುವಂತಿರಬೇಕು, ಮಾಡದಂತಿರ ಬೇ
ಮಾಡುವ ಮಾಟದೊಳು ತಾನಿಲ್ಲದಿರ ಬೇ
ನೋಡುವಂತಿರಬೇಕು, ನೋಡದಂತಿರ ಬೇ
ನೋಡುವ ನೋಟದೊಳು ತಾನಿಲ್ಲದಿರ ಬೇಕು

ಅಂದರೆ ಕರ್ಮವನ್ನು ಮಾಡುತ್ತಿರವಾ ನಾವು ಮಾಡುವ ಕಾರ್ಯಕ್ಕೆ ಅಂಟಿಕೊಳ್ಳ ಸುಖದುಃಖಗಳಿಗೆ ಒಳಗಾಗಬಾರದ ಅಂದರೆ, ಎಲ್ಲವನ್ನೂ ಸಮಾನವಾಗಿ ಕಾ ಬೇಕು.

ದುಃಖೇಷ್ವನುದ್ವಿಗ್ನ ಮನಾಃ
ಸುಖೇಷು ವಿಗತಸ್ಪೃಹಃ ॥
ವೀತರಾಗಭಯಃಕ್ರೋಧಃ
ಸ್ಥಿತಧೀ ರ್ಮುನಿರುಚ್ಯತೇ ॥

ದುಃಖದ ಸಮಯದಲ್ಲಿ ಕುಗ್ಗಿ ಹೋಗು ವುದೂ ಅಲ್ಲ, ಸುಖದ ಸಮಯದಲ್ಲಿ ಅತೀ ಹಿಗ್ಗುವುದೂ ಅಲ್ಲ. ಇದಕ್ಕೆ ಸಂಬಂಧಿಸಿ ಮತ್ತೊಂದು ಮುಖ್ಯ ಕರ್ಮತತ್ತ್ವವೆಂದರೆ ನಾನು ಮಾಡುವುದು ಯಾವುದೂ ಅಲ್ಲ, ನನ್ನಿಂದ ಆದುದಲ್ಲ; ಇದಕ್ಕೆಲ್ಲವೂ ಪರಮಾತ್ಮನೇ ಕಾರಣ. "ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್' – ನಾನೇನಿದ್ದರೂ ಬರೇ ನಿಮಿತ್ತ. ಇದೇ 'ನಾನು' ಎಂಬ ಅಹಂಕಾರ ವನ್ನು ಬೆಳೆಸಿಕೊಳ್ಳದೇ, ಅದನ್ನು ಕಾಮ, ಆಸೆ, ಮೋಹಗಳಿಂದ ಮುಚ್ಚಿಹೋಗದ ಹಾಗೆ ಕಾಪಾಡಬೇಕು. ಹೀಗೆ ಕರ್ಮವನ್ನು ನಾವು ಯಾವಾಗ ಯೋಗದೃಷ್ಟಿಯಿಂದ ಮಾಡುತ್ತೇವೆಯೋ ಆಗ ಕರ್ಮಬಂಧನ ದಿಂದ ಮುಕ್ತರಾಗಬಹುದು. ಆದುದರಿಂದ ಕರ್ಮವು ಬೀಗದ ಕೈ ಇದ್ದ ಹಾಗೆ. ಇದರಿಂದ ಕರ್ಮಬಂಧನವೂ, ಕರ್ಮವಿಮೋಚನೆಯೂ ಹೌದು. ಇದಕ್ಕೇನೆ ತುಳಸೀದಾಸರು,

ಕರ್ಮ ಪ್ರಧಾನ ವಿಶ್ವಕರೀ ರಾಖಾ ।
ಜೋ ಜಸ ಕರಹೀ ಸೋ ತಸ ಫಲ
ಚಾಖಾ ॥

ಎಂದಿದ್ದಾರೆ. ಈ ಕರ್ಮ ಪ್ರಧಾನವಾದ ಲೋಕದಲ್ಲಿ ನಮ್ಮ ಕರ್ಮದ ಅನುಸಾರ ಫಲ. ಯಾರು ಸುಕರ್ಮವನ್ನು ಮಾಡುತ್ತಾರೋ, ಅವರಿಗೆ ಸತ್ಫಲ, ಯಾರು ದುಷ್ಕರ್ಮಿಗಳೋ ಅವರಿಗೆ ಕೆಟ್ಟ ಫಲ.

ಕರ್ಮವನ್ನು ಮಾಡುವಾಗ ಅದನ್ನು ಯಜ್ಞಕ್ಕೆ ಪರಿವರ್ತಿಸಬೇಕೆಂದು ಕೃಷ್ಣ ಹೇಳುತ್ತಾನೆ. "ಯಜ್ಞಾರ್ಥಾತ್ ಕರ್ಮಣೋನ್ಯತ್ರ...". ಹಾಗಾದರೆ ಯಜ್ಞ ಎಂದರೇನು ? ಯಜ್ಞವೆಂದರೆ ದೇವಪೂಜಾ, ಸಂಗತಿಕರಣ ದಾನ, ದಾನವೆಂದರೆ ಬೇರೆಯವರ ಹಿತಕ್ಕಾಗಿ ತನ್ನದ್ದನ್ನು ತ್ಯಾಗ ಮಾಡುವುದು. ಅದನ್ನೇ ಕೃಷ್ಣ "ಮಾಮೇಕಂ ಶರಣಂ ವ್ರಜ' ನನ್ನನ್ನೇ ಶರಣು ಹೋಗು' ಎಂದ. 'ಅಳಾಗದೇ ಅರಸಾಗಲಾರ'–ಯಜ್ಞದಲ್ಲಿ ನಾವು ನೋಡುತ್ತೇವೆ, ಅಗ್ನಯೇ ಸ್ವಾಹಾ, ಅಗ್ನಯ ... ಇದಂ ನಮಮ., ಇಂದ್ರಾಯ ಸ್ವಾಹಾ ... ಇಂದ್ರಾಯ ಇದಂ ನಮಮ.'–ಹೇ ಅಗ್ನಿಯೇ ಇದು ನನ್ನದ್ದಲ್ಲ... ನಾನು' 'ಸರ್ವೇಷಾಂ ಮಹಾಜನಾನಾಂ, ಕ್ಷೇಮ ಸ್ಥೈರ್ಯ,ವಿಜಯ ಆಯುರಾರೋಗ್ಯ ಅಭಿವೃದ್ಧ್ಯರ್ಥಂ'' ಎಲ್ಲ ಮಹಾಜನರ ಸರ್ವತೋಮುಖ ಹಿತಕ್ಕಾಗಿ ಮಾಡುತ್ತಿದ್ದೇನೆ. ಈ ತ್ಯಾಗದ ಭಾವನೆಯೇ ಯಜ್ಞ.

ಈ ಪ್ರಪಂಚ ನಿಂತಿರುವುದೇ ಯಜ್ಞದ ಆಧಾರದ ಮೇಲೆ. ನಮ್ಮೆಲ್ಲ ಕರ್ಮಗಳನ್ನು ನಾವು ಯಜ್ಞಕ್ಕೆ ಪರಿವರ್ತಿಸಬೇಕು. ಎಲ್ಲರೂ ತಮ್ಮ ತಮ್ಮಲ್ಲಿ ಏನೇನಿದೆಯೋ ಅದನ್ನು ಕೊಡಬೇಕು. ಬುದ್ಧಿ ಇರುವವನು ಬುದ್ಧಿ. ಶ್ರಮ ಪಡುವವನು ಶ್ರಮ, ಪ್ರೀತಿ ಇರುವವನು ಪ್ರೀತಿ, ಇನ್ನು ಯಾವ್ಯಾವ ಅಭಿರುಚಿ ಇದೆಯೋ ಅದನ್ನೆಲ್ಲಾ ಈ ವಿರಾಟ್ ಯಜ್ಞಕ್ಕೆ ಸಮರ್ಪಿಸಬೇಕು ಹೇಗೆ 'ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ'.

ಎಲ್ಲ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸು. ಈ ರೀತಿ ಅರ್ಪಿಸುವಾಗ ಅದರ ನಿಜವಾದ ಅರ್ಥವನ್ನು ತಿಳಿದುಕೊ. ಹೀಗೆ ಮಾಡಿದ ಕರ್ಮ ಅಂದರೆ ನಿನ್ನನ್ನು ನೀನು ತಿಳಿದು ಮಾಡಿದ ಕರ್ಮ ನಿಜವಾದ ಶ್ರೇಯಸ್ಸನ್ನುಂಟುಮಾಡುತ್ತದೆ. ಅಂದರೆ ನಮಗೆ ಕರ್ಮದಲ್ಲಿ ಮಾತ್ರ ಅಧಿಕಾರ, ಫಲದಲ್ಲಿ ಅಲ್ಲ.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು
ಕದಾಚನ

* * * *

ಕುರ್ವನ್ನೇವೇಹ ಕರ್ಮಾಣಿ
ಜಿಜೀವೇಷೇಚ್ಛತ್ತಗಂ ಸಮಾಃ ।

ಎಂಬಂತೆ ಕರ್ಮಕ್ಕಾಗಿ ಕರ್ಮಮಾಡುವುದೇ ವಿನಾ ಕರ್ಮಫಲಕ್ಕಾಗಿ ಅಲ್ಲ.

ಹೀಗೆ ಪರಮಾತ್ಮನಲ್ಲಿ ಶರಣಾಗತರಾದಾಗ ನಮ್ಮಲ್ಲಿ ನಿಜವಾದ ಜ್ಞಾನ ಮೂಡುತ್ತದೆ. ಆಗ ನಾವು ಮಾಡುವ ಕರ್ಮದಲ್ಲಿ ಫಲದಾಸೆಯು ಕಡಿಮೆಯಾಗುತ್ತದೆ. ಫಲದಾಸೆ ಇಲ್ಲದ ಕರ್ಮ ನಿಜವಾದ ತ್ಯಾಗವೆನಿಸುತ್ತದೆ. ಈ ತ್ಯಾಗದ ಬೋಧನೆಯೇ ಗೀತೆಯ ಸಾರ.

ಕರ್ಮವು ಕಾಗದದ ತುಂಡಿನಂತೆ. ಭಕ್ತಿ ಸರಕಾರದ ಮುದ್ರೆಯಂತೆ. ಕರ್ಮಕ್ಕೆ ಭಕ್ತಿಯ ಮುದ್ರೆ ಬಿದ್ದಾಗ ಕಾಗದದ ತುಂಡಿಗೆ ರೂಪಾಯಿನೋಟಿಗೆ ಮೌಲ್ಯ ಬಂದಂತೆಯೇ ಮೌಲ್ಯ ಹೆಚ್ಚಾಗುತ್ತದೆ.

ಕಾಮ ಕ್ರೋಧಗಳು ಮನುಷ್ಯನ ಅರಿಷಡ್ವರ್ಗದಲ್ಲಿ ಮೊದಲನೇ ಎರಡು ಮುಖ್ಯ ವೈರಿಗಳು. ಇವುಗಳಿಂದಲೇ ಲೋಭ–ಮೋಹ, ಮದ ಮತ್ಸರಾದಿಗಳು ಹುಟ್ಟಿಕೊಳ್ಳುತ್ತವೆ. ಈ ಕಾಮವು ಆಸೆ, ಬಯಕೆ, ಎಂಬರ್ಥದಲ್ಲಿ ಬರುತ್ತದೆ. ಇದನ್ನು ತೃಪ್ತಿ ಪಡಿಸಲಸಾಧ್ಯ. ಕಾಮಕ್ಕೆ ತಡೆಯುಂಟಾದಾಗ ಕ್ರೋಧ ಹುಟ್ಟುತ್ತದೆ. ಇದು ಮಹಾಕೆಟ್ಟದ್ದು.

ಮನೆಯೊಳಗಿನ ಕಿಚ್ಚು ಮನೆಯ
ಸುಟ್ಟಲ್ಲದೆ,
ನೆರಮನೆಯ ಸುಡದು ಕೂಡಲ
ಸಂಗಮದೇವಾ

ಎಂದಿದ್ದಾರೆ ಬಸವಣ್ಣನವರು. ನಮ್ಮ ಒಡಲಿನ ಕಿಚ್ಚು ನಮ್ಮನ್ನೇ ಸುಡುತ್ತದೆ.

ಈ ಕಾಮಕ್ರೋಧಗಳೇ ಸ್ವಂತ ಇಚ್ಛೆ ಇಲ್ಲದಿದ್ದರೂ ಪ್ರೇರಣೆಕೊಟ್ಟು ಮಾನವನನ್ನು ಪಾಪಿಯನ್ನಾಗಿ ಮಾಡುತ್ತವೆ ಇವು ತುಂಬ ಪ್ರಬಲ. ಅಗ್ನಿಯಿಲ್ಲದೆ ಸುಡುತ್ತವೆ, ನೀರಿಲ್ಲದೆ ಮುಳುಗಿಸುತ್ತವೆ, ಹಗ್ಗವಿಲ್ಲದೆ ಕಟ್ಟಿ ಹಾಕುತ್ತವೆ, ಶಸ್ತ್ರವಿಲ್ಲದೆ, ತುಂಡರಿಸುತ್ತವೆ. ಆದುದರಿಂದಲೇ ಕೃಷ್ಣ,

'ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್' ಭಯಂಕರವೂ ಆದ ಶತ್ರುವನ್ನು ಗೆಲ್ಲು ಎನ್ನುತ್ತಾನೆ. ಹೀಗೆ "ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ''–ಯಾವನು ಕರ್ಮದಲ್ಲಿ ಆಸಕ್ತನಾಗಿ ಅವಶ್ಯಕವಾದ ಕರ್ಮವನ್ನು ಮಾಡುತ್ತಾನೋ ಅವನು ಸಿದ್ಧಿಯನ್ನು ಹೊಂದುತ್ತಾನೆ.

(24 ನೇ ಪುಟ ನೋಡಿ)

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ. ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನು ಳಿ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್ಸ್
ಬಂಗಾರಪೇಟೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್ ಟೌನ್
ಭದ್ರಾವತಿ.

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಆರ್.ವಾಸುದೇವಶೆಟ್ಟಿ
ದಳಸನೂರು.

ಅನಂತ ಭೂಕತಕರ
ಶ್ರೀಲಕ್ಷ್ಮೀ ವೆಂಕಟೇಶ ಸಂಸ್ಥಾನ
ಬಸವ ಕಲ್ಯಾಣ ಪೋಸ್ಟ್,
ಬೀದರ್

ಎಸ್. ಜಯರಾಂ
731, ೩ ಕ್ರಾಸ್ 2 ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
1697. 7 ಮುಖ್ಯರಸ್ತೆ
ಇ–ಬ್ಲಾಕ್. ಪೋಸ್ಟ್ ಆಫೀಸ್ ರಸ್ತೆ
2 ಸ್ಟೇಜ್ ರಾಜಾಜಿನಗರ
ಬೆಂಗಳೂರು–10

ಶ್ರೀಪತಿರಾವ್
ನ್ಯೂಸ್ ಏಜಂಟ್
C/o ಪೋಸ್ಟ್ ಮಾಸ್ಟರ್
ಉಡುಪಿ

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನ ಪಟ್ಟಣ

ಶಂಕರಪ್ಪ
ಫೋಟೋಗ್ರಾಫ್ರರ್
6 ಕ್ರಾಸ್, ಕೆ. ಟಿ. ಜೆ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಎಸ್. ಗುಜ್ಜಾಡಿ
S/o ಲಕ್ಷ್ಮೀನಾರಾಯಣ ನಾಯಕ
C/o ನರಸಿಂಹ ಆಶ್ರಮ
ಗಂಗುಲಿ 576216

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಎಂ. ವಿ. ವೆಂಕಟಾಚಲಪತಿ
ಗಾಯತ್ರಿ ಸ್ಟೋರ್ಸ್
ಜಿ. ಬಿ. ಎಸ್. ರಸ್ತೆ
ಮಧುಗಿರಿ

ಎಸ್. ವಿ. ಲಕ್ಷ್ಮೀನಾರಾಯಣಗುಪ್ತ
S/o ಎಸ್. ವೆಂಕಟನಾರಾಯಣ ವ
ಎಸ್ ವಿ. ಜಿ. ಎಸ್. ದೇವಾಲಯದ
ಪಾವಗಡ–ತುಮಕೂರು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

# ಶ್ರೀರಾಮ ಗೀತೆ

ಮರ್ಯಾದಾಪುರುಷೋತ್ತಮನೆಂದು ಕೀರ್ತಿತನಾದ ಭಗವಾನ್ ಶ್ರೀರಾಮಚಂದ್ರನ ಪುಣ್ಯಚರಿತ್ರೆಯನ್ನು ಆದಿಕವಿ ಬೃಹತ್ಕಾವ್ಯವಾಗಿ ಬರೆದ ವೇಳೆ, ಶ್ರೀರಾಮಚಂದ್ರನ ವಿಚಾರವಾಗಿ ನೂರಾರು ಸಾವಿರಾರು ಗ್ರಂಥಗಳು, ಕಾವ್ಯಗಳು, ನಾಟಕಗಳು ಭಾರತೀಯ ಭಾಷೆಗಳಲ್ಲಿ ರಚಿತವಾಗಿವೆ. ರಘುವರ ಚರಿತೆಯನ್ನು ಹೇಗೆ ತಿರುಗಿಸಿದರೂ ರಸಭರಿತ-ಸಕ್ಕರೆ ಅಚ್ಚು ಹೇಗೆ ತಿಂದರೂ ರುಚಿ ಎಂಬಂತೆ ಭಾರತೀಯರಿಗೆ ಶ್ರೀರಾಮನೆಂದರೆ ಸಾಕು ಮೈಪುಲಕಿತವಾಗುತ್ತದೆ. ಕವಿಗಳಿಗೆ ಶ್ರೀರಾಮಚರಿತೆ ಚಿರಂತನವಾದ ರಸತರಂಗಿಣಿ.

ಭಾರತೀಯರಿಗೆ ನೂತನ ಸಂವತ್ಸರ ಪ್ರಾರಂಭವಾದ ನಂತರ ಸಮಗ್ರದೇಶದಲ್ಲಿ ಆಚರಿಸಲಾಗುವ ಹಬ್ಬವೆಂದರೆ ಶ್ರೀರಾಮನವಮಿ – ಮಧುಮಾಸದಲ್ಲಾಚರಿಸಲಾಗುವ ಶ್ರೀರಾಮನ ಜನ್ಮೋತ್ಸವದ ಈ ಸಂದರ್ಭ, ದಯಾಪಯೋಧಿಯಾದ ದಾಶರಥಿಯ ಮಧುರ ಸ್ಮೃತಿಯೊಡನೆ ಸಮ್ಮಿಳಿತವಾಗಿದೆ. ಕಲಾವಿದರು ಈ ಸಂದರ್ಭದಲ್ಲಿ ತಮ್ಮ ಗಾನಕಲೆಯ ಮೂಲಕ, ನೃತ್ಯಕಲೆಯ ಮೂಲಕ ರಾಮನ ಗುಣಗಾನ ಮಾಡುತ್ತಾರೆ. ಆದಿಕಾವ್ಯದ ಪಾರಾಯಣವಂತೂ ಸಂಪ್ರದಾಯಬದ್ಧವಾದ ರೀತಿಯಲ್ಲಿ ನಡೆಯುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಶ್ರೀರಾಮ ಕರ್ಣಾಮೃತ ಒಂದು ವಿಶಿಷ್ಟ ಗುಂಪಿಗೆ ಸೇರಿದ ಗ್ರಂಥ. ಅದರಲ್ಲಿ 5 ಖಂಡಗಳಿದ್ದು ಒಟ್ಟು 441 ಶ್ಲೋಕರತ್ನಗಳಿವೆ. ಈ ಶ್ಲೋಕಗಳು ವಿವಿಧ ಛಂದಸ್ಸುಗಳಲ್ಲಿದ್ದು ರಮ್ಯತರವಾಗಿವೆ-ರಮಣೀಯವಾಗಿವೆ. ರಾಮ ಮಹಿಮಾಖಂಡ, ರಾಮವೈಭವಖಂಡ, ರಾಮತತ್ತ್ವಖಂಡ, ಸಶೇಷ ಫಲಖಂಡ-ಎಂಬ ರೀತಿಯಲ್ಲಿ ಕಂಗೊಳಿಸುವ ಈ ಸ್ತೋತ್ರ ಗ್ರಂಥ ಭಕ್ತವೃಂದಕ್ಕೆ ಆನಂದದಾಯಕ, ಸಂಗೀತಗಾರರಿಗೆ ಕಲ್ಪವೃಕ್ಷ. ಇಲ್ಲಿನ ಶ್ಲೋಕಗಳನ್ನು ವಿವಿಧ ರಾಗಗಳಲ್ಲಿ ಅಥವ ರಾಗ ಮಾಲಿಕಾ ರೂಪದಲ್ಲಿ ಹಾಡಲನುಕೂಲವಾದ ರೀತಿಯಲ್ಲಿ ರಚಿಸಲಾಗಿದೆ. ಸಂಸ್ಕೃತದಲ್ಲಿ ಧ್ಯಾನ ಶ್ಲೋಕಗಳ ಸೊಗಸು ಗಾಂಭೀರ್ಯ, ಕಲಾತ್ಮಕತೆ-ಮಹತ್ತ್ವ-ಎಲ್ಲರಿಗೂ ತಿಳಿದ ವಿಷಯವೆ. ರಾಮಕರ್ಣಾಮೃತದ ಶ್ಲೋಕಗಳೆಲ್ಲ ಧ್ಯಾನಶ್ಲೋಕಗಳ ಕಮನೀಯಲಾವಣ್ಯದಿಂದ ಕಂಗೊಳಿಸುತ್ತವೆ.

ಪ್ರಾತಃಸ್ಮರಾಮಿ ರಘುನಾಥ ಮುಖಾರವಿಂದಂ
ಪ್ರಾತರ್ಭಜಾಮಿ ರಘುನಾಥ ಕರಾರವಿಂದಂ
ಪ್ರಾತರ್ನಮಾಮಿ ರಘುನಾಥ ಪದಾರವಿಂದಂ

ಮೇಲ್ಕಂಡ ವಾಕ್ಯಗಳು ಒಂದೊಂದು ಶ್ಲೋಕದ ಪ್ರಥಮಚರಣಗಳು. ಶ್ರೀರಾಮನ ಮುಖಾರವಿಂದ-ಕರಾರವಿಂದ-ಪದಾರವಿಂದಗಳ ಸುಂದರ ವರ್ಣನೆ ಈ ಶ್ಲೋಕಗಳಲ್ಲಿ ಕಂಡುಬರುತ್ತದೆ.

ಅಮೀಲಯಸ್, ಉನ್ಮೀಲಯನ್ – ಆನಂದಯನ್-ಈ ಮೂರು ಮಾತುಗಳನ್ನು ಬಳಸಿಕೊಂಡು ರಚಿತವಾಗಿರುವ ಒಂದು ಸುಂದರ ಶ್ಲೋಕವಿದು.

ಅಮೀಲಯನ್ ದಶ ಶಿರೋವದನಾಂಬುಜಾತ
ಮುನ್ಮೀಲಯನ್ ಜನಕಜಾ
ನಯನೋತ್ಪಲೇ ಚ
ಆನಂದಯನ್ ಸಕಲ ಜೀವ ಚಕೋರರಾಶಿಂ
ಶ್ರೀರಾಮಚಂದ್ರ ಮನಿಶಂ ಕಲಯಾಮಿಚಿತ್ತೇ

ಶ್ರೀರಾಮನೆಂಬ ಚಂದ್ರ ರಾವಣನ ಶಿರಸ್ಸೆಂಬ ಕಮಲವನ್ನು ಬಾಡಿಸುತ್ತಾನೆ. ಸೀತೆಯ ನಯನ ನೈದಿಲೆಗಳನ್ನರಳಿಸುತ್ತಾನೆ. ಸಕಲ ಜೀವರಾಶಿಗಳೆಂಬ ಚಕೋರ ಪಕ್ಷಿಗಳಿಗಾನಂದ ನೀಡುತ್ತಾನೆ. ಇಂತಹ ರಾಮಚಂದ್ರನನ್ನು ಸದಾಕಾಲವೂ ಮನಸ್ಸಿನಲ್ಲಿ ಧ್ಯಾನಿಸುತ್ತೇನೆ – ಎಂಬ ಅರ್ಥದ ಈ ಶ್ಲೋಕದೊಂದಿಗೆ ಈ ಕೆಳಗಿನ ಶ್ಲೋಕ ಹೋಲಿಸಿನೋಡಿ.

ನೀಲಾಭ್ರದೇಹ ನಿಖಿಲೇಶ ಜಗನ್ನಿವಾಸ
ರಾಜೀವ ನೇತ್ರ ರಮಣೀಯ ಗುಣಾಭಿರಾಮ
ಶ್ರೀರಾಮ ದೈತ್ಯಕುಲ ಮರ್ದನ ರಾಮಚಂದ್ರ
ತ್ವತ್ಪಾದ ಪದ್ಮಂ ಅನಿಶಂ ಕಲಯಾಮಿ ಚಿತ್ತೇ

ಭವತಾಪತಪ್ತ ಜೀವಕ್ಕೆ ಈ ಎರಡು ಶ್ಲೋಕಗಳು ಶಾಂತಿ ನೀಡಬಲ್ಲವು.

ಶ್ರೀರಾಮನನ್ನು ಕವಿ ರತ್ನಕ್ಕೆ ಹೋಲಿಸಿ ಬರೆದಿರುವ ಕೆಲವು ಶ್ಲೋಕಗಳ ಸೌಂದರ್ಯ ಧ್ಯಾನಗಮ್ಯವಾಗಿದೆ.

ಇಕ್ಷ್ವಾಕು ವಂಶಾರ್ಣವ ಜಾತರತ್ನ
ಸೀತಾಂಗನಾಯೌವನ ಭಾಗ್ಯರತ್ನ
ನಾದನಾದಾಂತರತ್ನ ನಿಗಮ ಶಿಖರರತ್ನ
ಮುನಿಜನ ಜಪರತ್ನ
ಸತ್ಯವಾಕ್ಯಾರ್ಥರತ್ನ ಜಾನಕೀಮೋಹರತ್ನ
ಪ್ರಣವನಿಲಯರತ್ನ ......

ವಿದ್ವಾನ್ ಬ. ನ. ಗುಂಡೂರಾವ್

ಇತ್ಯಾದಿ ಮಾತುಗಳಿಂದ ಕೂಡಿರುವ ಶ್ಲೋಕಗಳಂತೂ ರತ್ನಾಲಂಕೃತ ಶ್ರೀರಾಮನನ್ನು ನೆನಪಿಗೆತರುತ್ತವೆ.

ಆದಿಕಾವ್ಯದಲ್ಲಿ ನವರಸಗಳೂ ವರ್ಣಿತವಾಗಿವೆಯಷ್ಟೆ. ಎಲ್ಲೆಲ್ಲಿ ಯಾವ ರಸಮಯ ಸನ್ನಿವೇಶವೆಂಬುದನ್ನು ಸೂಚಿಸುತ್ತದೆ. ಈ ಶ್ಲೋಕ.

ಶೃಂಗಾರಂ ಕ್ಷಿತಿನಂದಿನೀ ವಿರಹಣೇ
ವೀರಂ ಧನುರ್ಭಂಜನೇ
ಕಾರುಣ್ಯಂ ಬಲಿಭಂಜನೇ
ಅದ್ಭುತರಸಂ ಸಿಂಧೌಗಿರಿಸ್ಥಾಪನೇ
ಹಾಸ್ಯಂ ಶೂರ್ಪನಖಾಮುಖೇ
ಭಯಬೀಭತ್ಸಮನ್ಯೇಮುಖೇ
ರೌದ್ರಂ ರಾವಣಮರ್ದನೇ
ಮುನಿಜನೇ ಶಾಂತಂ ವಪುಃ ಪಾತುನಃ

ಕವಿ ಒಂದು ಶ್ಲೋಕದಲ್ಲಿ ರಾಮಾಯಣವನ್ನು ಕ್ಷೀರಸಾಗರಕ್ಕೆ ಹೋಲಿಸಿದ್ದಾನೆ. ತಜ್ಜನ್ಯವಾದ ಸಕಲ ವಸ್ತುಗಳಿಗೂ ಹೋಲಿಸಿದ್ದಾನೆ–

ವಾಲ್ಮೀಕಿ ಸ್ಮೃತಿ ಮಂದರೇಣ
ಮಥಿತ ಸ್ಸೀತಾರಮಾಸಂಭವಃ
ಸುಗ್ರೀವಾಮರಭೂರುಹೋ
ಅಂಗದ ಗಜಸೌಮಿತ್ರಿ ಚಂದ್ರೋದಯಃ
ವಾತೋತ್ಪನ್ನ ಮಣಿಃ ವಿಭೀಷಣ ಸುಧಾ
ಪೌಲಸ್ತ್ಯ ಹಾಲಾಹಲ
ಶ್ರೀರಾಮಾಯಣ ದುಗ್ಧ ವಾರ್ಧಿ
ರಮಲೋಭೂಯಾತ್ ಸನಃ ಶ್ರೇಯಸೇ

ಶ್ರೀಮದ್ರಾಮಾಯಣ ವೆಂಬ ಕ್ಷೀರಾಬ್ಧಿಯನ್ನು ವಾಲ್ಮೀಕಿಯ ಪ್ರತಿಭೆಯೆಂಬ ಮಂದರವು ಕಡೆದಾಗ, ಸೀತೆಯೆಂಬ ಲಕ್ಷ್ಮಿ, ಸುಗ್ರೀವನೆಂಬ ಕಲ್ಪವೃಕ್ಷ, ಅಂಗದನೆಂಬ ಐರಾವತ, ಲಕ್ಷ್ಮಣನೆಂಬ ಚಂದ್ರ, ಆಂಜನೇಯನೆಂಬ ಕೌಸ್ತುಭಮಣಿ, ವಿಭೀಷಣನೆಂಬ ಅಮೃತ, ರಾವಣನೆಂಬ ಹಾಲಾಹಲ ವಿಷ ಹುಟ್ಟಬಂದಿವೆ – ಯೆಂಬ ಕಲ್ಪನೆ ರಮಣೀಯವಾಗಿದೆ.

ವಾಮಾಂಕರಾಮೇ ವಿಪದಾಂ ವಿರಾಮೇ
ಜಿತಾರಿಕಾಮೇ ಪ್ರಣತೇಶ್ವರಾಮೇ
ಗುಣಾಭಿರಾಮೇ ಭುವನೈಕರಾಮೇ
ಶ್ರೀರಾಮಚಂದ್ರೇ ರಮತಾಂ ಮನೋ ಮೇ

ಎಡಗಡೆ ಸೀತೆಯನ್ನು ಹೊಂದಿದ, ವಿಪನ್ನಾಶಕನಾದ, ಕಾಮನೆಂಬ ಶತ್ರುವನ್ನು ಧ್ವಂಸಮಾಡಿದ,

ಭಕ್ತರಭೀಷ್ಟಗಳನ್ನು ನೆರವೇರಿಸುವ, ಸಕಲ ಸದ್ಗುಣ ಯುಕ್ತನಾದ, ಜಗತ್ತಿಗೆ ಏಕೈಕ ಸ್ವಾಮಿ ಯಾದ ಶ್ರೀರಾಮನಲ್ಲಿ ನನ್ನ ಮನಸ್ಸು ಸದಾ ರಮಿಸುತ್ತಿರಲಿ.

ಕೌಸಲ್ಯೆಯೆಂಬ ಶ್ರೇಷ್ಠ ಪಾತ್ರದಲ್ಲಿ ಜನ್ಮ ಪಡೆದು, ದಶರಥ ನೆಂಬ ನೀರಿನಿಂದ ಪೋಷಿಸಲ್ಪಟ್ಟು ಸೋದರರೆಂಬ ರೆಂಬೆಗಳಿಂದ ಕೂಡಿ, ಸೀತೆಯೆಂಬ ಬಳ್ಳಿಯಿಂದ ಆಲಿಂಗಿತವಾಗಿ, ರಾಕ್ಷಸರನ್ನು ನಾಶ ಪಡಿಸುವ, ಲೋಕಕ್ಕೆ ಶೀತಲಚ್ಛಾಯೆಯನ್ನು ಆನಂದವನ್ನು ನೀಡುವ ಶ್ರೀರಾಮನೆಂಬ ಕಲ್ಪ ವೃಕ್ಷವು ಇಷ್ಟಾರ್ಥಗಳನ್ನು ನಮಗೆ ದಯಪಾಲಿ ಸಲಿ—ಎಂಬ ಅರ್ಥದ ಈ ಕವಿತೆಯ ಲಾಲಿತ್ಯ ಗಮ ನಿಸ ಬೇಕು:—

ಕೌಸಲ್ಯಾಲಸ ದಾಲವಾಲ ಜನಿತಃ
ಸೀತಾಲತಾಲಿಂಗಿತಃ
ಸಿಕ್ತಂ ಪಂಕ್ತಿ ರಥೇನ ಸೋದರ
ಮಹಾ ಶಾಖಾಭಿರತ್ಯುನ್ನತಃ
ರಕ್ತ ಸ್ತೀಕ್ಷ್ಣ ವಿದಾರ ಪಾಟನ
ಪಟುಚ್ಛಾಯಾ ಭಿರಾನಂದ ಕೃತ್
ಅಸ್ಮಾದ್ವಾಂಛಿತ ಸತ್ಫಲಾನಿ
ದದತು ಶ್ರೀರಾಮಕಲ್ಪದ್ರುಮಃ

ಶ್ರೀರಾಮ ಕರ್ಣಾಮೃತದಲ್ಲಿ ಒಂದು ಅರ್ಥಗರ್ಭಿತ ವಾದ ಶ್ಲೋಕ—ಗಣಿತ ಆ ಶ್ಲೋಕದ ವಸ್ತು. ಆದರೆ ಗಣಿತದ ನೆರವಿನಿಂದ ಪ್ರಭು ರಾಮಚಂದ್ರನನ್ನು ಕಲಾತ್ಮಕವಾಗಿ ಸ್ತುತಿಸುತ್ತ ಆತನ ಪರಾಕ್ರಮ ವನ್ನು ಕೊಂಡಾಡಲಾಗಿದೆ—

ನಾಗಾನಾಮಯುತಂ ತುರಂಗನಿಯುತಂ
ಸಾರ್ಧಂ ರಥಾನಾಂ ಶತಂ
ಪಾದಾತಿಂಶತಕೋಟಿ ಯುದ್ಧದಳಿತಾ
ನ್ಯತ್ರೈಕ್ಯಸ್ಸಬಂಧೋರಣೇ
ಏವಂ ಕೋಟಿ ಕಬಂಧ ನರ್ತನ ವಿಧೌ
ಕಿಂಚಿದ್ಧ್ವನಿಃ ಕಿಂಕಿಣೀಃ
ಯಾವಮಾರ್ಧಃ ಪರಮಾತ್ಮನೋ ರಘುಪತೇಃ
ಕೋದಂಡ ಘಂಟಾರವಃ

ಹತ್ತುಸಾವಿರ ಆನೆಗಳು, 1 ಲಕ್ಷ ಕುದುರೆಗಳು, 150 ರಥಗಳು, ಒಂದು ನೂರು ಕೋಟಿ ಕಾಲಾಳು —ಇಷ್ಟು ಸೈನ್ಯ ಹತವಾದಾಗ ಕಬಂಧ ಎಂಬ ಭೂತ (ತಲೆಯಿಲ್ಲದ ಬರಿ ಮುಂಡ) ತೃಪ್ತಿಯಿಂದ ನರ್ತಿಸುತ್ತದೆ. ಹೀಗೆ ಕೋಟಿ ಭೂತಗಳು ನರ್ತಿ ಸಿದರೆ ಶ್ರೀರಾಮಚಂದ್ರನ ಕೋದಂಡದಲ್ಲಿ ಒಂದು ಕಿರುಗಂಟೆ ಕ್ಷಣಕಾಲ ಧ್ವನಿ ಮಾಡುತ್ತದೆ. ರಾಮ ರಾವಣರ ಯುದ್ಧದ ಸಮಯದಲ್ಲಿ, ರಾವಣ ಮೂಲಬಲವನ್ನು ಕಳಿಸಿದಾಗ, ಶ್ರೀರಾಮ ಚಂದ್ರನ ಕೋದಂಡದಲ್ಲಿದ್ದ ಎಲ್ಲ ಕಿರುಗಂಟೆಗಳೂ ಒಂದುವರೆ ಘಂಟೆಕಾಲ ಘಣ ಘಣ ವೆಂದು ಒಂದೇ ಸಮನೆ ಧ್ವನಿಮಾಡಿದವು. ಆಗ ರಾಮ, ದಾಶರಥಿ ಯಲ್ಲ, ಕೌಸಲೇಯನಲ್ಲ, ಇಕ್ಷ್ವಾಕು ಕುಲದೀಪಕ ನಲ್ಲ, ಸ್ವಯಂ ಪರಮಾತ್ಮ. (ಆ ಲೋಕಭೀಕರ ಸಂಗ್ರಾಮದಲ್ಲಿ ಸತ್ತವರ ಸಂಖ್ಯೆ ಗಣಿತಕ್ಕೆ ಸಿಕ್ಕದು—ಎಂಬ ಅರ್ಥ ಇಲ್ಲದೆ )

ರಾಮಚಂದ್ರನನ್ನು ಕವಿ ಬಾಲಕನಾಗಿ, ಕಲ್ಯಾ ಣರಾಮನಾಗಿ, ಕೋದಂಡರಾಮನಾಗಿ, ಮನ್ಮಥ ರಾಮನಾಗಿ, ಸೀತಾರಾಮನಾಗಿ, ವಿಜಯರಾ ನಾಗಿ, ಪಟ್ಟಾಭಿರಾಮನಾಗಿ, ಸಿಂಹಾಸನಾರ ನಾದ ರಾಮನಾಗಿ, ವಿಶ್ವರೂಪಿರಾಮನಾಗಿ, ವಿ ರೂಪಿರಾಮನಾಗಿ, ತ್ರಿಪುರರೂಪದರಾಮನಾ ತಾರಕರಾಮನಾಗಿ,.........ನಾನಾ ರೂ ಳಲ್ಲಿ ಕಂಡಿದ್ದಾನೆ — ಕಂಡು ಆನಂದಿಸಿದ್ದಾ ಆನಂದದಿಂದ ಬಣ್ಣಿಸಿದ್ದಾನೆ—ಬಣ್ಣಿಸಿ ಧನ್ಯನ ದ್ದಾನೆ—ಚರಿತಾರ್ಥನಾಗಿದ್ದಾನೆ — ಚಿಕ್ಕಮಗು ಸಹಜವಾದ ಚೇಷ್ಟೆಯನ್ನು ಲಾವಣ್ಯಮಯವಾ ಬಣ್ಣಿಸುವ ಶ್ಲೋಕದ ಅರ್ಥವನ್ನು ಹೀಗೆ ಸಂ ಹಿಸ ಬಹುದು.

ನವರತ್ನ ಖಚಿತವಾದ ಮಂಚ. ಅದರ ಮೇ ಹಂಸ ತೂಲಿಕಾತಲ್ಪ. ಚಿಕ್ಕಮಗು ರಾಮಚಂ ತಾಯಿಯ ಮಗ್ಗುಲಲ್ಲಿ ಕೈಕಾಲು ಬಡಿಯು ರತ್ನಾಭರಣ ಭೂಷಿತನಾಗಿ, ಅರ್ಧನಿಮೀ ನಯನನಾಗಿ, ಸ್ತನ್ಯಪಾನವ ಮಾಡುತ್ತ,ಇನ್ನೊಂ ಕೈಯಿಂದ ಇನ್ನೊಂದು ಸ್ತನದ ಚೂಚುಕವ ಹೀಗೆ ಹಾಗೆ ಹಿಚುಕುತ್ತ ಇದ್ದಾನೆ. ಇದರಿ ತಾಯಿಗೆ ಒಂದು ವಿಧವಾದ ಹೇಳಲಾಗದ ಆನ ವಾಗುತ್ತಿದೆ. ರಾಮನನ್ನಾಕೆ ಗಾಢವಾಗಿ ಎ ಬಚಿಕೊಳ್ಳುತ್ತಿದ್ದಾಳೆ. ಇಂತಹ ರಾಮಚಂ ನನ್ನು ಹೃದಯದಲ್ಲಿ ನೆಲೆಸಲಿ.

ಮಾತುಃ ಪಾರ್ಶ್ವೇಚರಂತಂ ಮಣಿಮಯ
ಶಯನೇ ಮಂಜುಭೂಷಾಂಚಿತಾಂಗಂ
ಮಂದಂ ಮಂದಂ ಪಿಬಂತಂ
ಮುಕುಳಿತ ನಯನಂ ಸ್ತನ್ಯಮನ್ಯ ಸ್ತನಾಗ್ರ
ಅಂಗುಳ್ಯಗ್ರೈಸ್ಪೃಶಂತಂ ಸುಖಪರವಶಯಾ
ಸುಸ್ಮಿತಾಲಿಂಗಿತಾಂಗಂ
ಗಾಢಂ ಗಾಢಂ ಜನನ್ಯಾಃ ಕಲಯತು
ಹೃದಯೇಮಾಮಕಂ ರಾಮಬಾಲಂ

ಮಿಥಿಲೆಯಲ್ಲಿ ಹರಧನುರ್ಭಂಗವಾದ ನಂ ಸೀತಾ ಕಲ್ಯಾಣದ ಒಂದು ಸನ್ನಿವೇಶ........ ವಧೂವರರು ಕಲ್ಯಾಣ ಮಂಟಪದಲ್ಲಿದ್ದಾ ದಿವ್ಯಾಲಂಕೃತವಾದ ಸೀತಾರಾಮರನ್ನು ಕಂ ಸಹಸ್ರ ಸಹಸ್ರ ಜನರು, ಕಣ್ಣ ಪುಣ್ಯವೆಂ ಭಾವಿಸಿ ಜಯಜಯಕಾರ ಮಾಡುತ್ತಿದ್ದಾ ಲಜ್ಜಾ ರಸದ ಸೊಬಗಿನ ಸೀತೆ ಶ್ರೀರಾಮನ ಸಿರಿ ಡಿಯ ಮೇಲೆ ಅಣಿಮುತ್ತುಗಳ ಧಾರೆಯೆರೆಯ ಸಿದ್ಧವಾಗಿದ್ದಾಳೆ. ಮುತ್ತೈದೆಯರು ಬಂಗಾರ ಮೊರಗಳಲ್ಲಿ ಶುಭ್ರವಾದ ಬಿಳಿಯ ಮುತ್ತು ಳನ್ನು ಹಿಡಿದು ನಿಂತಿದ್ದಾರೆ. ಜಾನಕಿ ಕೆಂದಾವ

(24 ನೇ ಪುಟ ನೋ

## ಪ್ರಾಣಿ ಪಕ್ಷಿ ಬಲಿಯ ನಿಷೇಧ ಕಾನೂನು

ಆಂಧ್ರಪ್ರದೇಶದ 1950 ರ ಪ್ರಾಣಿ ಪಕ್ಷಿ ಬಲಿ ನಿಷೇಧ ಕಾನೂನಿನ ೩ ನೇ ಕಲ ಮಿನನ್ವಯ ಯಾವುದೇ ವ್ಯಕ್ತಿಯೂ ಸಾರ್ವಜನಿಕ ಆರಾಧನೆಯ ಸ್ಥಳಗಳಲ್ಲಿ,ಧಾರ್ಮಿಕ ಆರಾಧನೆಯ ಸ್ಥಳಗಳಲ್ಲಿ ಅಥವಾ ಯಾವುದೇ ಧಾರ್ಮಿಕ ಮೇಳ ಮೆರವಣಿಗೆಗಳಲ್ಲಿ ಯಾಗಲೀ ಪ್ರಾಣಿ ಪಕ್ಷಿಗಳನ್ನು ಬಲಿ ನೀಡುವುದನ್ನು ನಿಷೇಧಿಸಲಾಗಿದ್ದು, ಅದೇ ಕಾನೂನಿನ 6 ನೇ ಕಲಮಿನನ್ವಯ ಈ ನಿಯಮವನ್ನುಲ್ಲಂಘಿಸಿದವರಿಗೆ ಮೂರು ತಿಂಗ ಳಿನಿಂದ ಐದು ತಿಂಗಳ ಸಾದಾಸಜೆ ಅಥವಾ ಮುನ್ನೂರು ರೂಗಳ ದಂಡ ಅಥವಾ ಎರಡನ್ನೂ ವಿಧಿಸಲಾಗುವುದು. ಹಾಗಾಗಿ ಪ್ರಾಣಿ ಪಕ್ಷಿ ಬಲಿಯನ್ನು ಕೋಳಿಜಗಳ ಗಳನ್ನು ತಡೆಯಲು ಕೈಗೊಳ್ಳತಕ್ಕದ್ದು.

ಜಿಲ್ಲಾಧಿಕಾರಿಗಳು ಹಬ್ಬ, ಉತ್ಸವಗಳಿಗೆ ಮೊದಲು ಅಧಿಕಾರಿ ಹಾಗೂ ಸಾರ್ವಜನಿಕರ ಸಭೆಗಳನ್ನು ಏರ್ಪಡಿಸಿ, ಪ್ರಾಣಿ ಪಕ್ಷಿ ಬಲಿಗಳನ್ನು ತಡೆಯಲು ಕ್ರಮಗಳನ್ನು ಕೈಗೊಳ್ಳಬೇಕೆಂದು ಬೇಡಲಾಗಿದೆ.

**ಹನುಮಂತರಾವ್**
ಸರ್ಕಾರದ ಉಪಕಾರ್ಯದರ್ಶಿ, ಆಂಧ್ರಪ್ರದೇಶ.

# ಮಹಾಸತಿ ಮಾಲಾವತೀ

ಉಪಬರ್ಹಣ ಗಂಧರ್ವರಾಜ, ಒಮ್ಮೆ ಬ್ರಹ್ಮ ಸಭೆಯಲ್ಲಿ ಅಪ್ಸರೆಯಾದ 'ರಂಭೆ'ಯ ನೃತ್ಯ ನಡೆಯುತ್ತಿದ್ದಾಗ ಆತ ಹಿಂಬದಿಯ ಗಾಯಕನಾಗಿದ್ದ. ಇದ್ದಕ್ಕಿದಂತೆ ಬೀಸಿದ ಗಾಳಿಯ ಪರಿಣಾಮವಾಗಿ ರಂಭೆಯ ಉಡುಗೆ ಅಸ್ತವ್ಯಸ್ತವಾಯಿತು. ಈಕೆಯ ಅಂಗ ಸೌಂದರ್ಯವನ್ನು ಕಂಡ ಉಪಬರ್ಹಣನ ಮನಸ್ಸು ಉಲ್ಲೋಲಕಲ್ಲೋಲವಾಯಿತು.

ದೇವಸಭೆಯಲ್ಲಿ ನಡೆದ ಈ ಅಶಿಷ್ಟ ವ್ಯವಹಾರದಿಂದ ಬ್ರಹ್ಮನಿಗೆ ಮಿತಿಮೀರಿದ ಕೋಪ ಬಂದಿತು. "ಆತ್ಮ ಸಂಯಮ ಮಾಡಿಕೊಳ್ಳಲಾರದಷ್ಟು ದುರ್ಬಲನಾದ ನೀನು ದೇವಯೋನಿಯಲ್ಲಿರಲು ಸರ್ವಥಾ ಅನರ್ಹ; ಈಗಲೇ ನಿನ್ನ ಪ್ರಾಣಪಕ್ಷಿ ಹಾರಿಹೋಗಲಿ" ಎಂದು ಬ್ರಹ್ಮದೇವನು ಆ ಗಂಧರ್ವನಿಗೆ ಶಾಪಕೊಟ್ಟನು.

'ಚಿತ್ರರೇಖ' ಎಂಬ ಗಂಧರ್ವನ ಮಗಳಾದ "ಮಾಲಾವತೀ" ಉಪಬರ್ಹಣನ ಧರ್ಮಪತ್ನಿ. ಮಹಾಪತಿವ್ರತೆಯಾದ ಈಕೆ ಪತಿಯ ಮೃತಶರೀರವನ್ನು ಎತ್ತಿಕೊಂಡು ಪುಷ್ಕರ ತೀರ್ಥಕ್ಕೆ ಬಂದಳು. ಅಲ್ಲಿ ಪವಿತ್ರವಾದ ತೀರ್ಥೋದಕದಿಂದ ಪತಿಯ ಶರೀರವನ್ನು ಶುದ್ಧಗೊಳಿಸಿ ತನ್ನ ಪತಿಯನ್ನು ಬದುಕಿಸಿಕೊಡುವಂತೆ ದೇವತೆಗಳನ್ನು ಪ್ರಾರ್ಥಿಸಿದಳು. ಆದರೆ ಈಕೆಯ ಪ್ರಾರ್ಥನೆಗೆ ದೇವತೆಗಳಲ್ಲಿ ಯಾರೊಬ್ಬರೂ ಓಗೊಡಲಿಲ್ಲ. ಇದರಿಂದ ಬೇಸರಗೊಂಡ ಮಾಲಾವತಿ ಪತಿಯ ಚಿತೆಯಲ್ಲಿ ಬೆಂದು ಪ್ರಾಣತ್ಯಾಗಮಾಡುವುದಾಗಿ ನಿಶ್ಚಯಿಸಿದಳು. ಚಿತೆ ಸಿದ್ಧವಾಯಿತು. ಅದರಲ್ಲಿ ಕುಳಿತ ಈ ಪತಿವ್ರತಾಶಿರೋಮಣಿಯ ತೇಜಸ್ಸು ಎಲ್ಲೆಡೆಯಲ್ಲಿಯೂ ಹರಡಿತು.

ತನ್ನ ಪ್ರಾರ್ಥನೆಯನ್ನು ಮನ್ನಿಸಿದ ದೇವತೆಗಳಿಗೆ ತಾನು ಉರಿದುಹೋಗುವ ಮುನ್ನ ಶಾಪಕೊಡಬೇಕೆಂದು ನಿರ್ಣಯಿಸಿದಳು. ಮಾಲಾವತಿಯ ಈ ಸಂಕಲ್ಪವನ್ನು ಅರಿತ ದೇವತೆಗಳು ಕಂಗಾಲಾಗಿ ಬ್ರಹ್ಮನನ್ನು ಕುರಿತು ಪ್ರಾರ್ಥಿಸಿ, ಪ್ರತ್ಯಕ್ಷನಾದ ಆತನ ಸಲಹೆಯಂತೆ ವೈಕುಂಠಕ್ಕೆ ಹೋಗಿ ಶ್ರೀಮನ್ನಾರಾಯಣನ ಬಳಿಯಲ್ಲಿ ತನ್ನ ಕಷ್ಟವನ್ನು ನಿವೇದಿಸಿಕೊಂಡರು.

ದೇವತೆಗಳಿಗೆ ಅಭಯದಾನ ಮಾಡಿದ ಶ್ರೀಮನ್ನಾರಾಯಣನು ಬ್ರಾಹ್ಮಣ ವಟುವಿನ ವೇಷ ಧರಿಸಿ, ನೇರವಾಗಿ ಪುಷ್ಕರ ತೀರ್ಥಕ್ಕೆ ಆಗಮಿಸಿದನು. "ಎಲೈ ಪತಿವ್ರತಾಶಿರೋಮಣಿಯೇ! ನೀನು ಯಾರು? ಯಾರೊಂದಿಗೆ ಈ ಚಿತೆಯನ್ನು ಏರಿರುವಿ? ಪತಿಯೊಂದಿಗೆ ಸತೀಧರ್ಮವನ್ನು ಪಾಲಿಸಲು ಹೊರಟ ನಿನ್ನ ಮುಖದಲ್ಲಿ ಸಾತ್ವಿಕತೆಗೆ ಬದಲಾಗಿ ತಾಮಸೀ ಭಾವವು ಇಂದು ಕಾಣುತ್ತಿದೆ. ಈ ಕೋಪ ತಾಪವೇಕೆ?" ಎಂದು ಆತನು ತನ್ನ ಮಧುರವಾದ ವಚನಗಳಿಂದ ಮಾಲಾವತಿಯನ್ನು ಪ್ರಶ್ನಿಸಿದನು.

ಪತಿವ್ರತೆಯಾದ ಮಾಲಾವತಿಯು ತನ್ನ ಪೂರ್ಣ ಪರಿಚಯವನ್ನು, ಪಡೆದ ಸಂಗತಿಯೆಲ್ಲವನ್ನೂ ತಿಳಿಸಿ, ತನ್ನ ಶಾಪದಿಂದ ಜಗತ್ತಿನಲ್ಲಿ ಒಬ್ಬ ದೇವತೆಯೂ ಉಳಿಯಲಾರನು ಎಂದು ನುಡಿದಳು.

"ಅಮ್ಮ! ನಾನೊಬ್ಬ ವೈದ್ಯ. ಮೃತರನ್ನು ಬದುಕಿಸುವ ಮೃತಸಂಜೀವಿನೀ ವಿದ್ಯೆ ನನಗೆ ತಿಳಿದಿದೆ. ಇದರಿಂದ ನೀನು ಲಾಭಪಡೆಯಬಹುದು. ಪ್ರಕೃತ, ನಿನ್ನ ಶಾಪಕ್ಕೆ ಗುರಿಯಾಗುವ ದೇವತೆಗಳು ಯಾರು? ನನ್ನ ಮಂತ್ರಶಕ್ತಿಯಿಂದ ಅವರೆಲ್ಲರನ್ನೂ ನಿನ್ನ ಮುಂದೆ ನಿಲ್ಲುವಂತೆ ಮಾಡುವೆನು" ಎಂದು ವಟು ವೇಷದ ಶ್ರೀಮನ್ನಾರಾಯಣನು ಹೇಳಿದನು.

ಮಾಲಾವತಿಯು ನಿರ್ದೇಶಿಸಿದಂತೆ, ಯಮ, ಮೃತ್ಯು, ಮತ್ತು ಕಾಲದೇವತೆಗಳು ಮುಂದೆ ಬಂದು ನಿಂತಿರು.

**ವಿದ್ವಾನ್ ಬಿ. ಬಾಲಗಣಪತಿ ಭಟ್ಟ**



ಅವರೆಲ್ಲರನ್ನೂ ಪ್ರತ್ಯಕ್ಷವಾಗಿ ನೋಡಿದ ಆ ಪತಿವ್ರತೆ "ಎಲೈ ದೇವತೆಗಳಿರಾ! ನನ್ನ ಪತಿದೇವನ ಪ್ರಾಣವನ್ನು ಯಾವ ಕಾರಣದಿಂದ ತೆಗೆದಿರಿ? ಆತನಿಂದ ಆದ ಅಪರಾಧವಾವುದು!" ಎಂದು ನೇರವಾಗಿ ಯಮದೇವನನ್ನೇ ಪ್ರಶ್ನಿಸಿದಳು.

"ದೇವಿ! ಆಯುಸ್ಸು ತೀರದೆ ಯಾರೊಬ್ಬರೂ ಸಾಯಲಾರರು. ಭಗವದಿಚ್ಛೆಯಂತೆ ಈ ಕಾರ್ಯ ನಡೆಯುವುದು. ನಾವೆಲ್ಲರೂ ಆ ಭಗವಂತನಿಗೆ ಸರ್ವಥಾ ಅಧೀನರು. ಪ್ರಾರಬ್ಧದ ಅನುಭವವು ಮುಗಿದನಂತರ ಜೀವಿಯು ಮುಕ್ತನಾಗುತ್ತಾನೆ. ಇದು ನಿತ್ಯಸತ್ಯ" ಎಂದು ಯಮದೇವನು ಉತ್ತರಿಸಿದನು. ಮೃತ್ಯು, ಕಾಲದೇವತೆಗಳೂ ಈ ಮಾತನ್ನು ಅನುಮೋದಿಸಿದರು.

ಇದರಿಂದ ಸಮಾಧಾನಗೊಂಡ ಆಕೆಯು ಆ ವಿಪ್ರವಟುವಿನಿಂದ ಮೃತಸಂಜೀವಿನೀ ವಿದ್ಯೆಯನ್ನು ಪಡೆದಳು. ಕಷ್ಟಕ್ಕೆ ಹಿಗ್ಗಾಗದೇ ಯಾರೊಬ್ಬರಿಂದಲೂ ಸುಖವನ್ನು ಪಡೆಯಲು ಸಾಧ್ಯವಾಗಲಾರದು ಎಂದು ನಿಶ್ಚಯಿಸಿ ಮತ್ತೊಮ್ಮೆ ತನ್ನ ಪತಿಯನ್ನು ಬದುಕಿಸಿಕೊಡುವಂತೆ ಆ ದೇವತೆಗಳನ್ನು ಪ್ರಾರ್ಥಿಸಿದಳು.

ಶ್ರೀಮನ್ನಾರಾಯಣನ ಆದೇಶದಂತೆ ಸೂರ್ಯಾದಿ ಪ್ರಾಣಾಧಾರ ದೇವತೆಗಳು ಉಪಬರ್ಹಣ ಗಂಧರ್ವನ ದೇಹವನ್ನು ಪ್ರವೇಶಿಸಿದರು. ಸೂರ್ಯನು ಕಣ್ಣುಗಳಲ್ಲಿಯೂ, ಅಶ್ವಿನೀದೇವತೆಗಳು ಮೂಗಿನಲ್ಲಿಯೂ ವಾಯುವು ಶ್ವಾಸೋಚ್ಛ್ವಾಸದಲ್ಲಿಯೂ, ಅಗ್ನಿಯು ಜಠರದಲ್ಲಿಯೂ ಪ್ರವೇಶಿಸಿದರು. ಹೀಗೆ ಎಲ್ಲ ದೇವತೆಗಳೂ ಆ ಮೃತಶರೀರವನ್ನು ನೆಲೆಮಾಡಿಕೊಂಡ ನಂತರ ದೇಹದಲ್ಲಿ ಶಾಖ ಉತ್ಪನ್ನವಾಯಿತು. ಉಸಿರಾಟ ಆರಂಭವಾಯಿತು. ಆದರೂ ಆತ ಮೇಲೆ ಏಳಲೇ ಇಲ್ಲ ಮೂರ್ಛಿತನಂತೆ ಬಿದ್ದಿದ್ದ. ಮಾಲಾವತಿಯು ಗಾಬರಿಯಿಂದ ಭಗವಂತನನ್ನು ಕುರಿತು ಪ್ರಾರ್ಥಿಸಿದಳು. ವಟುವೇಷದ ವಿಷ್ಣುವು ಪ್ರತ್ಯಕ್ಷನಾಗಿ ಆ ದೇಹವನ್ನು ಸ್ಪರ್ಶಿಸಿದ.

ಪರಮಾತ್ಮನು ಚೈತನ್ಯರೂಪವಾಗಿ ಆ ದೇಹವನ್ನು ಪ್ರವೇಶಿಸಿದೊಡನೆಯೇ ಗಂಧರ್ವನು ಮೇಲೆದ್ದು ಕುಳಿತನು.

ಪತಿಯನ್ನು ಪಡೆದ ಮಾಲಾವತಿಯು ಧನ್ಯಳಾದಳು.

---

(19ನೇ ಪುಟದಿಂದ)

ಇಂದಿನ ಜೀವನ ಪರಿಸ್ಥಿತಿಗೆ, ಕರ್ಮಯೋಗ ಸಮಂಜಸವಾಗಿದೆ. ಸ್ವಾರ್ಥ ತುಂಬಿದ ಲೋಕ ಇದನ್ನು ಸಂಪೂರ್ಣ ಬದಿಗಿರಿಸಿದೆ. ನಮ್ಮ ಪ್ರತಿಯೊಬ್ಬ ಜವಾಬ್ದಾರಿಯುತ ಪ್ರಜೆಗಳೂ ಕರ್ಮಯೋಗವನ್ನು ಸ್ವಲ್ಪವಾದರೂ ಅರ್ಥಮಾಡಿಕೊಂಡಲ್ಲಿ ನಮ್ಮ ದೇಶಕ್ಕೆ ಇಂಥ ಪರಿಸ್ಥಿತಿ ಖಂಡಿತಾ ಬರುತ್ತಿರಲಿಲ್ಲ.

ಪರಿಶುದ್ಧತೆ, ಪರಿಪೂರ್ಣತೆ, ಸಾತ್ವಿಕತೆ–ಇವು ಕರ್ಮಯೋಗದಿಂದ ಮಾತ್ರ ಸಾಧ್ಯ. ಈ ಸಂಸಾರವೆಂಬ ಅಜ್ಞಾನದ ಕುರುಕ್ಷೇತ್ರದಲ್ಲಿ ನಾವು ಜಯಿಸಬೇಕಾದರೆ, ಶ್ರೀಕೃಷ್ಣ ಬೋಧಿಸಿದ ಕರ್ಮಯೋಗವೇ ಸಾಧನ. ಜಟಿಲ ಜೀವನದ ಕುಟಿಲತೆಗೆ ಇದೇ ಸದ್ಬೋಧೆ. ಇದೇ ನಮ್ಮ ಜೀವನಕ್ಕೆ ತಾರಕಮಂತ್ರ, ಸಿದ್ಧಾಂತ. ಆದ್ದರಿಂದಲೇ "ಕರ್ಮಯೋಗೋ ವಿಶಿಷ್ಯತೇ".

★

(22ನೇ ಪುಟದಿಂದ)

ಯಂತಿರುವ ತನ್ನ ಬೊಗಸೆಗಳಲ್ಲಿ ಮುತ್ತುಗಳನ್ನೆತ್ತಿ ಕೊಂಡಾಗ – ಕೈಯ ಬಣ್ಣವು ಕೆಂಪಗೆ ಕಾಣುತ್ತವೆ. ಇಂದ್ರ ನೀಲಮಣಿ ವಿಗ್ರಹದಂತಿರುವ ರಾಮನ ಮೇಲೆ ಬಿದ್ದಾಗ ಮುತ್ತುಗಳು ನೀಲ ವರ್ಣದಿಂದ ಶೋಭಿಸುತ್ತವೆ. ಮೊರದಲ್ಲಿ ಬಿಳಿ, ಕೈಗೆ ಬಂದಾಗ ಕೆಂಪು–ರಾಘವನ ಮೇಲೆಬಿದ್ದಾಗ ನೀಲಿ–ಇದೇನು ಸೋಜಿಗವೆಂದು ಸೀತೆ ಮುಗುಳುನಗೆಯನ್ನು ಸೂಸುತ್ತ ನೋಡುತ್ತಾಳೆ. ಗುಣತ್ರಯಾತೀತನಾದ ಪ್ರಭುರಾಮಚಂದ್ರ ರತ್ನಯುಗಳಿಂದ ಇಲ್ಲಿ ಪೂಜಿಸಲ್ಪಡುತ್ತಿದ್ದಾನೆ. ಸೀತಾರಾಮರ ಕಲ್ಯಾಣದ ಈ ಶುಭಮಂಗಳಕರವಾದ ಮುತ್ತುಗಳು ನಮಗೆ–ನಿಮಗೆ–ಶುಭವನ್ನು ಕರುಣಿಸಲಿ–ಎನ್ನುತ್ತಾನೆ ಕವಿ. ಈ ಕವಿತೆ ಬಹುಸುಂದರ.

ಜಾನಕ್ಯಾಃಕಮಲಾಮಲಾಂಜಲಿ
ಪುಟೇಯಾಃ ಪದ್ಮರಾಗಾಯಿತಾಃ
ನ್ಯಸ್ತಾ ರಾಘವ ಮಸ್ತಕೇಚ
ವಿಲಸತ್ಕುಂದ ಪ್ರಸೂನಾಯಿತಾಃ
ಸ್ರಸ್ತಾ ಶ್ಯಾಮಲ ಕಾಯಕಾಂತಿ ಕಲಿತಾಃ
ಯಾ ಇಂದ್ರನೀಲಾಯಿತಾಃ
ಮುಕ್ತಾಸ್ತಾ ಶುಭದಾ ಭವಂತು ಭವತಾಂ
ಶ್ರೀರಾಮವೈವಾಹಿಕಾಃ

ನೀಲ ಮೇಘಶ್ಯಾಮಲ ವರ್ಣದ ಶ್ರೀರಾಮಚಂದ್ರನ ಬಹುಮುಖ ವ್ಯಕ್ತಿತ್ವವನ್ನು ಚಿತ್ರಿಸುವ ಈ ಕವಿತೆ–

ಕೃಷ್ಣಂ ಭೀಮಧನುಃ ಕಠೋರನಿನದಂ
ಬ್ರಹ್ಮಾದಿ ಸಂವಿಸ್ಮಯಂ
ಭಾಸ್ವದ್ವಾಜಿ ಗಜೇನ ಯಾನಮನಿಶಂ
ಶಂಭೋಶ್ಶಿರಃ ಕಂಪಯನ್
ದಿಗ್ದಂತಿ ಸ್ಖಲನಂ ಕುಲಾದ್ರಿಚಲನಂ
ಸಪ್ತಾರ್ಣವೋನ್ಮೀಲನಂ
ವೈದೇಹೀ ಮದನಂ ಮದಾಂಧ ದಮನಂ
ತ್ರೈಲೋಕ್ಯ ಸಮ್ಮೋಹನಮ್

ಸಮಸ್ತ ಕಲ್ಯಾಣಗುಣಾಭಿರಾಮನಾದ ದಾಶರಥಿಯನ್ನು ಹೃತ್ಪೀಠದಲ್ಲಿರಿಸಿ ಧ್ಯಾನಿಸುವ ಕವಿ ಒಂದು ಹಂತದಲ್ಲಿ ತುಂಬಿಬಂದ ಭಕ್ತಿ ರಸಾವೇಶದಲ್ಲಿ ಬರೆದ ಈ ಕವಿತೆಯ ಸೊಗಸು ಚಿನ್ತನ ಶೀಲರಿಗೆ ಮಾತ್ರ ವೇದ್ಯವಾಗುವಂತಿದೆ.

ಮಜ್ಜೀವಂ ಮದನುಗ್ರಹಂ ಮದಧಿಪಂ
ಮದ್ಧ್ಯಾನ ಮಂತ ಸ್ಸುಖಂ
ಮತ್ತಾತಂ ಮಮಸದ್ಗುರುಂ ಮಧುಕರಂ
ಮೋಹಾಂಧ ವಿಚ್ಛೇದ
ಮತ್ಪುಣ್ಯಂ ಮದನೇಕಬಾಂಧವಜನಂ
ಮಜ್ಜೀವನಂ ಮನ್ನಿ
ಮತ್ಸಿದ್ಧಿಂ ಮಮಸರ್ವ ಕರ್ಮ ಸುಕೃತಂ
ರಾಮಂ ಭಜೇ ತಾರಕಃ

ಭಕ್ತನಿಗೆ ಭಗವಂತನೇ ಸರ್ವಸ್ವ. ವಿದ್ಯೆಹೇ ವನವನೆ, ಬುದ್ಧಿ ಕಲಿಸುವವನವನೆ–ಉದ್ಧಾರ ಕ ಸ್ವಾಮಿಯೂ ಅವನೆ!! ಕವಿಯ ಹೃದಯ ಸದಾಕಾಲವೂ ಅನುರಣಿಸುವ ಏಕೈಕ ಪ್ರಾರ್ಥ ಯೆಂದರೆ–

ರಾಮಚಂದ್ರ, ದಯಾಸಾಂದ್ರ,
ರಘುವೀರ, ನೃಪೋತ್ತಮ
ಲೋಚನಾಭ್ಯಾಂ ಕೃಪಾಪೂರ
ಪೂರ್ಣಾಭ್ಯಾಂ ಮಾಂ ವಿಲೋಕಯ

ಕೃಪಾಕಟಾಕ್ಷ ಬೀರಿ–ಅನುಕಂಪದಿಂದ ನೋಡಿ ಕಾಪಾಡು.

ಲೋಕದಲ್ಲಿ ವ್ಯಕ್ತಿಗೆ ಅನೇಕ ಬಂಧು ಬಾ ವರಿರಬಹುದು ಇಷ್ಟ ಮಿತ್ರರಿರ ಬಹುದು. ಆ ಜೀವ ಸಖನಾದವನು ರಾಮನೊಬ್ಬನೇ. ಅವ ತಂದೆ ತಾಯಿ ಬಂಧು ಬಳಗ ಎಲ್ಲವೂ. ಹೀ ದೃಢವಾಗಿ ನಂಬಿದ ಜೀವಕ್ಕೆ ಯಾವಭಯ ಇರದು.

ಜನನೀಜಾನಕೀಸಾಕ್ಷಾಜ್ಜನಕೋರಘುನಂದ
ಲಕ್ಷ್ಮಣೋಮಿತ್ರಮಸ್ಮಾಕಂ
ಕೋವಿಚಾರಃ ಕುತೋ ಭಯ

ಕೌಸಲ್ಯಾನಯನೇಂದುವೂ, ದಶರಥ ಮುಖಾ ವಿಂದು ಮಾರ್ತಾಂಡನೂ, ಸೀತಾ ಮಾನ ಹಂಸನೂ, ದೀನವತ್ಸಲನೂ, ಸರ್ವಲೋಕ ರಕ್ಷ ದಕ್ಷನೂ, ಆದ ಪ್ರಭು ರಾಮಚಂದ್ರ ಕಂದಪ ಕೋಟಿಲಾವಣ್ಯನೂ ಹೌದು. ಇಂದು ಕೋ ನಿಭಾನನನೂ ಹೌದು. ಆತಸೌಂದರ್ಯದ ಸಾಕಾ ಪ್ರತಿಮೆ. ಮೂರ್ತಿಮಾನ್ ಲಾವಣ್ಯ – ರೂ ಪಡೆದ ಸೌಕುಮಾರ್ಯ, ಮೂರ್ತಿಭವಿಸಿದ ವಾತ್ಸ ಮಾನವಾಕಾರ ಧರಿಸಿದ ದಿವ್ಯಮಹಿಮೆ, ಆದ್ದರಿ ದಲೇ ಹಿರಿಯರು ಹೇಳುತ್ತಾರೆ–

ಯೇ ಶೃಣ್ವಂತಿ ಪಠನ್ತಿ ರಾಮಚರಿತಂ
ತೇಯಾಂತಿ ವಿಷ್ಣೋಃಪದ

ಯುವವಾಣಿ

# ಮಹಾಯೋಗಿ ಅರವಿಂದರು

ಆಗಸ್ಟ್ 15 ತುಂಬಾ ಮಹತ್ವಪೂರ್ಣದಿನ. ಪರದಾಸ್ಯದಲ್ಲಿದ್ದ ಭಾರತ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ್ದು ಕೂಡ ಅಂದೆ. ಮಹರ್ಷಿ ಶ್ರೀ ರಾಮಕೃಷ್ಣ ಪರಮಹಂಸರು ಸಮಾಧಿಸ್ಥರಾದುದು ಕೂಡ ಅಂದೆ ಅಷ್ಟೇ ಅಲ್ಲ ಭಾರತದ ಭಾಗ್ಯ ವಿಧಾತರೂ, ಯೋಗಿಗಳಲ್ಲಿ ಯೋಗಿಗಳೂ ಆದ ಮಹಾನ್ ತಪಸ್ವಿ ಶ್ರೀ ಅರವಿಂದರು ಜನಿಸಿದ್ದು ಕೂಡ ಅಂದೆ.

ಶ್ರೀ ಅರವಿಂದರು ಭಾರತೀಯ ಋಷಿ ಜೀವನದ ತಳಹದಿಯ ಮೇಲೆ ಮೂರ್ತಿವೆತ್ತ ಮಹಾ ಪುರುಷರು. ಅವರು ಓರ್ವ ಮಹಾನ್ ದೇಶಪ್ರೇಮಿಗಳಾಗಿದ್ದರು. ಆಧ್ಯಾತ್ಮ ಸಂಪತ್ತನ್ನು ವಿಶ್ವಕ್ಕೇ ಕೊಡುಗೆಯಾಗಿ ನೀಡಿದ ಯೋಗಿವರ್ಯರಾಗಿದ್ದರು. ವಿಶ್ವಕಲ್ಯಾಣ ಕೋರುವ ಮಾನವತಾವಾದಿಗಳಾಗಿದ್ದರು. ಮಿಗಿಲಾಗಿ ನಡೆಗೂ-ನುಡಿಗೂ ಅವಿನಾಭಾವ ಬಾಂಧವ್ಯವನ್ನಿರಿಸಿಕೊಂಡಿದ್ದ ಆದರ್ಶ ವ್ಯಕ್ತಿಗಳಾಗಿದ್ದರು. ಅಧ್ಯಾತ್ಮ ಶಿಖರದ ತುತ್ತತುದಿಗೇರಿ ವಿಜಯಿಗಳಾಗಿದ್ದ ಈ ವ್ಯಕ್ತಿಯನ್ನು ಒಂದು 'ಯುಗಶಕ್ತಿ' ಎಂದು ಕರೆದರೆ ಅತಿಶಯೋಕ್ತಿ ಎನಿಸದು. ಪಾಶ್ಚಾತ್ಯ ಭೋಗಭೂಮಿಯಲ್ಲೂ ಯೋಗವನ್ನು ಅಳವಡಿಸಿಕೊಂಡು, ಬಾಳಿ ಬದುಕಿದ ಅರವಿಂದರ ಬದುಕೇ ಒಂದು ಭಗವದ್ಗೀತೆ.

ಅರವಿಂದರು 1872 ನೇ ಇಸವಿ, ಆಗಸ್ಟ್ ಮಾಹೆ, 15 ನೆಯ ದಿನಾಂಕದಂದು ಕಲ್ಕತ್ತಾದಲ್ಲಿ ಜನಿಸಿದರು. ಡಾ॥ ಕೃಷ್ಣಧನ ಘೋಷ್ ಮತ್ತು ಸ್ವರ್ಣಲತಾದೇವಿ ಅವರುಗಳೇ ಇವರ ಮಾತಾಪಿತೃಗಳು. ಕೃಷ್ಣಧನಘೋಷರು ಕಟ್ಟಾ ಹಿಂದೂ ಧರ್ಮ ವಿರೋಧಿಗಳಾಗಿದ್ದರು. ಮಿಗಿಲಾಗಿ ಕ್ರಿಶ್ಚಿಯನ್ ಧರ್ಮವನ್ನು ತುಂಬಾ ಮೆಚ್ಚಿಕೊಂಡವರಾಗಿದ್ದರು. ಭಾರತೀಯ ಸಂಸ್ಕೃತಿ ಎಂದರೆ ತುಂಬಾ ಕಸಿವಿಸಿಗೊಳ್ಳುತ್ತಿದ್ದ ಅವರು ತಮ್ಮ ಮೆಚ್ಚಿನ ಮೂರನೆಯ ಮಗನಿಗೆ 'ಅರವಿಂದ ಅಕ್ರಾಯಿಡ್ ಘೋಷ್' ಎಂದು ನಾಮಕರಣ ಮಾಡಿದ್ದರು. ತಮ್ಮ ಮಗನಿಗೆ 'ಭಾರತೀಯತನ' ಸೋಕ ಬಾರದೆಂದು ತುಂಬಾ ಎಚ್ಚರವಹಿಸಿದ್ದರು. ಬದಲಾಗಿ ಇಂಗ್ಲೀಷ್‌ಭಾಷೆಯನ್ನೇ ಆಡಲು ಆಜ್ಞೆ ಮಾಡಿದ್ದರು. ಹೀಗಾಗಿ ಅರವಿಂದರು 'ಮಾತೃಭಾಷೆ' ಯಿಂದಲೂ, ಭಾರತೀಯ ಸಂಸ್ಕೃತಿ-ನಾಗರಿಕತೆಗಳಿಂದಲೂ ವಂಚಿತರಾಗಿ ಬೆಳೆಯಬೇಕಾಗಿ ಬಂತು.

ಪಾಶ್ಚಾತ್ಯ ಸಂಸ್ಕೃತಿಯ ವಾತಾವರಣದಲ್ಲಿ ಬೆಳೆಯುತ್ತಿದ್ದ ಅರವಿಂದರು ಪಂಜರದ ಗಿಳಿಯಂತಾದರು. ವಂಗಭಾಷೆ ಆಡುವಂತಿಲ್ಲ, ಭಾರತೀಯರೊಡನೆ ಬೆರೆಯುವಂತಿಲ್ಲ. ಅವರ ಮೇಲೆ ತಂದೆಯವರ ಪ್ರಭಾವ ಬಿದ್ದಂತೆಯೇ ಅವರ ತಾಯಿಯ ತಂದೆಯ ಪ್ರಭಾವವೂ ಬಿದ್ದಂತೆ ಕಾಣುತ್ತದೆ. ಅವರ ತಾತ ರಾಜನಾರಾಯಣ ಬೋಸರು ಒಳ್ಳೆಯ ವಿಚಾರವಾದಿಗಳಾಗಿದ್ದರು. ಸದಾ ದೇವಾರಾಧನೆ ಉಪಾಸನೆಗಳಲ್ಲೇ ಕಾಲಹರಣ ಮಾಡುತ್ತಿದ್ದರು. ಯೋಗಶಕ್ತಿಯೂ ಕೂಡ ಅವರಿಗೆ ಲಭಿಸಿತ್ತಂತೆ, ಇವರ ಪ್ರಭಾವದ 'ಬೀಜ' ಪಾಶ್ಚಾತ್ಯ ಸಂಸ್ಕೃತಿಯಾರಾಧಕರಾಗಿದ್ದ ಬಾಲ ಅರವಿಂದರ ಹೃದಯದಲ್ಲಿ ಬಿದ್ದಿತೇನೋ. ಮುಂದೆ ಆ ಬೀಜ ಸಸಿಯಾಗಿ ದಾಂಗುಡಿಯಿಟ್ಟು, ಅಧ್ಯಾತ್ಮ ಕಲ್ಪವೃಕ್ಷವಾಯಿತು.

ಅರವಿಂದರು ಏಳವರ್ಷದ ಹುಡುಗನಾಗಿರುವಾಗಲೇ ತಾಯ್ನಾಡನ್ನು ತೊರೆಯಬೇಕಾಗಿ ಬಂದಿತು. ಕೃಷ್ಣಧನಘೋಷರು ತಮ್ಮ ಮೂವರು ಮಕ್ಕಳನ್ನು ಇಂಗ್ಲೆಂಡಿಗೆ ರವಾನಿಸಿದರು. ಅಲ್ಲಿ ಡ್ರ್ಯೂವೆಟ್ ದಂಪತಿಗಳು ಇವರ ಪೋಷಕರಾದರು. ಅಲ್ಲಿ ಅರವಿಂದರು ತಮ್ಮ ಸೋದರರಾದ ವಿನಯಭೂಷಣ, ಮನಮೋಹನರೊಡನೆ ಮ್ಯಾಂಚೆಸ್ಟರ್ ನಲ್ಲಿದ್ದ 'ಗ್ರಾಮರ್‌ಸ್ಕೂಲ್' ಸೇರಿದರು. ಈ ಪೂರ್ವದಲ್ಲಿ ಅರವಿಂದರಿಗೆ ಡ್ರ್ಯೂವೆಟ್ ದಂಪತಿಗಳೇ ಮನೆಯಲ್ಲಿ ಪಾಠ ಹೇಳುತ್ತಿದ್ದರು. ಹನ್ನೆರಡು ವರ್ಷ ತುಂಬುವುದರೊಳಗಾಗಿ ಅರವಿಂದರು ಬಹು ಉನ್ನತಸ್ತರವನ್ನು ಏರಿದ್ದರು. ಲ್ಯಾಟಿನ್, ಇಂಗ್ಲೀಷ್, ಪ್ರೆಂಚ್ ಭಾಷೆಗಳಲ್ಲಿ ಅಪಾರವಾದ ಪರಿಣತಿಯನ್ನು ಪಡೆದಿದ್ದರು. 'ಬೈಬಲ್' ನಂತ ಮಹಾಕೃತಿಯನ್ನು ಓದಿ, ಅರಗಿಸಿಕೊಂಡಿದ್ದರು. ಖ್ಯಾತಕವಿಗಳಾದ ಷೆಲ್ಲಿ, ಕೀಟ್ಸ್, ಷೇಕ್ಸ್‌ಪಿಯರ್ ಮುಂತಾದವರ ಮಹಾನ್‌ಕೃತಿಗಳನ್ನು ವ್ಯಾಸಂಗ ಮಾಡಿ ತಮ್ಮ ಜ್ಞಾನಾನುಭವವನ್ನು ವಿಕಾಸ ಮಾಡಿಕೊಂಡಿದ್ದರು. ಭಾರತೀಯನ ಇಂಗ್ಲೀಷ್ ಶೈಲಿ, ಪ್ರಭುತ್ವ ಕಂಡು ಪಾಶ್ಚಾತ್ಯರು ಬೆರಗಾಗಿ ಹೋಗಿದ್ದರಂತೆ. ಕೇವಲ ಹನ್ನೆರಡನೆಯ ವಯಸ್ಸಿಗೆ ಅರವಿಂದ 'ಬಾಲಕವಿ' ಯಾಗಿದ್ದ. ಹಲವಾರು ಕವಿತೆಗಳನ್ನು ರಚಿಸಿದ. ಪ್ರಶಸ್ತಿಗಳ ಸರಮಾಲೆಗಳಿಸಿದ್ದ ಸಾಕೆ!

ಬಾಲಕನಾಗಿ ವಿದೇಶಕ್ಕೆ ಹೋದ ಅರವಿಂದರು, ವಿಚಾರಶೀಲ ತರುಣನಾಗಿ 1892 ರಲ್ಲಿ ಭಾರತಕ್ಕೆ ಬಂದರು. ಅವರು ಪಡೆದ ಪದವಿಗೆ ಅರ್ಹವಾದ ನೌಕರಿ ಪಡೆದು ಇಂಗ್ಲೆಂಡಿನಲ್ಲೇ ಹಾಯಾಗಿರಬಹುದಾಗಿತ್ತು. ಆದರೆ ಅವರಿಗೆ ಅದೇಕೋ ಮಾತೃಭೂಮಿಯ ಮೇಲೆ ಅತಿಯಾದ ಪ್ರೇಮ ಉಂಟಾಗಿತ್ತು ಜನ್ಮವಿತ್ತ ಭಾರತಾಂಬೆಯನ್ನು ಎಂದು ಕಾಣುವೆನೋ, ಅಲ್ಲಿನ ನದಿಗಳಲ್ಲಿ ಮಿಂದು, ಗಿಡಮರಗಳ ಚೆಲುವು ಕಂಡು ಎಂದು ಪಾವನನಾಗುವೆನೋ ಎಂದು ಅಡಿಗಡಿಗೆ ತವಕ ಪಡುತ್ತಿದ್ದರು. ಭಾರತಕ್ಕೆ ಅಡಿಯಿಟ್ಟ ಕೂಡಲೆ ಅವರಿಗೆ ಅವರ್ಣನೀಯವಾದ ಅನುಭವವೊಂದಾಯಿತಂತೆ. 'ದಿವ್ಯ ಶಾಂತಿ' ಯೊಂದು ಅವರ ಹೃದಯದಲ್ಲಿ ನೆಲೆಯೂಯಿತಂತೆ. ಅವರು ಉದರಪೋಷಣೆಗೆ ಸರ್ಕಾರಿ ನೌಕರಿ ಹಿಡಿದರೂ ಅವರೆಂದೂ ಅಲ್ಲಿ ಭೋಗಜೀವಿಗಳಾಗಿರಲಿಲ್ಲ. ಬದಲಾಗಿ ಸರಳಜೀವಿಗಳಾಗಿದ್ದರು. ಆದರ್ಶ ವ್ಯಕ್ತಿಯಾಗಿದ್ದರು.

ಅರವಿಂದರು ಸ್ವದೇಶಕ್ಕೆ ಮರಳಿದಾಗ ಭಾರತದ ಸ್ಥಿತಿ ತುಂಬಾ ಹೀನವಾಗಿತ್ತು. ಭಾರತಾಂಬೆ ಪರದಾಸ್ಯದಲ್ಲಿದ್ದಳು. ಭಾರತೀಯರು ಬ್ರಿಟಿಷರ ಗುಲಾಮರಾಗಿದ್ದರು. ಸರ್ವ ಸ್ವಾತಂತ್ರ್ಯಗಳಿಂದ ವಂಚಿತರಾಗಿದ್ದರು. ಇದನ್ನು ಕಣ್ಣಾರೆ ಕಂಡ ಅರವಿಂದರು ಮಮ್ಮಲ ಮರುಗಿದರು. ಪುಣ್ಯಭೂಮಿ ಭಾರತವನ್ನು ಬಿಟ್ಟು, ಪರದೇಶಕ್ಕೆ ಹೋದುದಕ್ಕಾಗಿ ತುಂಬಾ ನೊಂದರು. ಭಾರತದ ಪಾರತಂತ್ರ್ಯದ ವಿಮೋಚನೆಗಾಗಿ ದೃಢ ಸಂಕಲ್ಪ ಮಾಡಿದರು. ಮುಂಬೈನಿಂದ ಪ್ರಕಟವಾಗುತ್ತಿದ್ದ 'ಇಂದು ಪ್ರಕಾಶ' ಪತ್ರಿಕೆ ಮುಖಾಂತರ ಲೇಖನಗಳನ್ನು ಬರೆದು ಭಾರತೀಯರನ್ನು ಹುರಿದುಂಬಿಸಿದರು ದೆಸೆ ತಪ್ಪಿದ ಕಾಂಗ್ರೆಸ್ ಸಂಸ್ಥೆಯನ್ನು ಟೀಕಿಸಿದರು. ಒಟ್ಟಾರೆ ಅರವಿಂದರ ಲೇಖನಗಳು ಭಾರತೀಯರನ್ನು ಜಾಗೃತಿಗೊಳಿಸುವಲ್ಲಿ ಸಫಲವಾದವು. 1901 ರಲ್ಲಿ ಮೃಣಾಲಿನೀ ದೇವಿ ಅವರೊಡನೆ ವಿವಾಹವಾಯಿತು. ಆದರೆ ಆ ಸಾಧ್ವೀಮಣಿ ಅರವಿಂದರಿಂದ ದೂರಾಗಿ ಓಗೊಡದ ಲೋಕದತ್ತ ಸಾಗಿದಳು. ಇದರಿಂದಾಗಿ ಅವರು ಭೋಗಜೀವನದಿಂದ ತ್ಯಾಗಜೀವನದ ಕಡೆ ತಮ್ಮ ಬದುಕಿನ ಬಂಡಿಯನ್ನು ತಿರುಗಿಸಿದರು. 'ತ್ಯಾಗ-ಬಲಿದಾನ – ರಕ್ತತರ್ಪಣಗಳಿಂದಲೇ ದೇಶಕ್ಕೆ ಸ್ವಾತಂತ್ರ್ಯ' ಎಂಬ ಸತ್ಯವನ್ನು ಮನಗಂಡರು.

ಕವಿತಾಕೃಷ್ಣ

‘ಭವಾನಿ ಮಂದಿರ’ ಸ್ಥಾಪಿಸಿದರು. ಬಿಸಿರಕ್ತದ ತರುಣರನ್ನು ಒಗ್ಗೂಡಿಸಿ, ಬ್ರಿಟೀಷರ ಮೇಲೆ ಬಂಡೇಳಲು ಪ್ರೇರೇಪಿಸಿದರು. ಸಿಡಿಮದ್ದು ತಯಾರಿಸಲು ಆಸ್ಥೆ ವಹಿಸಿದರು. ಲೋಕಮಾನ್ಯ ತಿಲಕರೊಡಗೂಡಿ ಹೋರಾಟಕ್ಕಿಳಿದರು.

ಅರವಿಂದರನ್ನು ಬಂಧಿಸಿ ಬ್ರಿಟಿಷ್ ಸರ್ಕಾರ ಅವರನ್ನು 1907 ರಲ್ಲಿ ಸೆರೆಮನೆಗೆ ತಳ್ಳಿತು. ತ್ಯಾಗಜೀವಿಗಳಾದ ಅರವಿಂದರು ಅಲ್ಲಿ ಯೋಗ ಜೀವನವನ್ನು ಪ್ರಾರಂಭಿಸಿದರು. ಶಕ್ತಿಯ ಮಹತ್ವವನ್ನು ಸ್ವಾನುಭವದಿಂದ ಮನಗಂಡರು. ‘ಅತಿಮಾನಸ ಶಕ್ತಿ’ ಹೊಂದಿ ರಸ ತಪಸ್ವಿಯಾದರು. ಬಾಹ್ಯ ಜಗತ್ತನ್ನು ಭಗವಂತನ ದಿವ್ಯ ಸ್ವರೂಪವಾಗಿ ಕಂಡರು. ಬ್ರಿಟಿಷರ ಸೆರೆಮನೆ ಅವರ ಪಾಲಿಗೆ ಗುರುಮನೆ ಆಯಿತು. ಸರ್ವೋತ್ತಮನ ಸಾಕ್ಷಾತ್ಕಾರ ಮಾಡಿಸಿತು. ತಮ್ಮ ದೇಹವನ್ನೇ ದೇವಾಲಯವಾಗಿಸಿಕೊಂಡರು. ಮುಂದೆ ಘಟಿಸಲಿರುವ ವಿಚಾರಗಳನ್ನು ಇಂದೇ ಕರಾರುವಾಕ್ಕಾಗಿ ನುಡಿಯುವಂತ ದಿವ್ಯದೃಷ್ಟಿಯನ್ನು ಹೊಂದಿದ್ದರು. ಅವರು ಸ್ವಾತಂತ್ರ್ಯ ಹೋರಾಟದಿಂದ ಯೋಗದ ಕಡೆಗೆ ಹೊರಳಿದಾಗ, ‘ತಾವು ಕ್ರಾಂತಿಯನ್ನು ಬಿಟ್ಟು ಶಾಂತಿ ಎಂದು ಕುಳಿತಿರುವಿರಲ್ಲ. ದಯವಿಟ್ಟು ಹೋರಾಟಕ್ಕೆ ಇಳಿಯಿರಿ’ ಎಂದು ಕೆಲವಾರು ಅಭಿಮಾನಿಗಳು ಒತ್ತಾಯಿಸಿದರು. ಆಗ ಅರವಿಂದರು ತುಂಬಾ ಗಂಭೀರರಾಗಿ ನುಡಿದರು: ‘ಈ ರಾತ್ರಿಯು ಕಳೆದು, ನಾಳೆ ಬೆಳಕು ಮೂಡುವುದು ಎಷ್ಟು ಸತ್ಯವೋ, ದೇಶಕ್ಕೆ ಸ್ವಾತಂತ್ರ್ಯ ಬರುವುದೂ ಕೂಡ ಅಷ್ಟೇ ಸತ್ಯ. ಈ ಕಾರ್ಯ ಮಾಡಲು ಅಸಂಖ ಶಕ್ತಿಗಳು ಈಗಾಗಲೆ ಕಾರ್ಯೋನ್ಮುಖವಾಗಿ ಅವರ ಮಾತು ಸತ್ಯವಾಯಿತು. ಅವರ ಹು ಹಬ್ಬವಾದ ಆಗಸ್ಟ್ 15 ರಂದೇ ದೇ ಸ್ವಾತಂತ್ರ್ಯ ಲಭಿಸಿತು.

ಅರವಿಂದರು ತಮ್ಮ ಸಾಧನಾಕ್ಷೇತ್ರವ ಪಾಂಡಿಚೆರಿಯನ್ನು ಆಯ್ದುಕೊಂಡರು. 1914 ‘ಆರ್ಯ’ ಪತ್ರಿಕೆಯನ್ನು ಪ್ರಾರಂಭಿಸಿದರು. ನಂ ಸಾಹಿತ್ಯ ಮತ್ತು ಜ್ಞಾನಾರಾಧನೆಯ ಮಾಡತೊಡಗಿದರು. ಮೀರಾ ರಿಚರ್ಡ್ ಯಾದರು. ಅವರ ಪ್ರಭಾವದಿಂದ ‘ಶ್ರೀಮ ಆದರು. ಯೋಗಸಾಧನೆಯಿಂದ ಮುಂದೆ ರನ್ನು ಅತಿಮಾನಸ ಪ್ರಜ್ಞೆ, ಅವರಿ ಅಧ್ಯಾತ್ಮ ಶಿಖರವನ್ನೇರಿದರು. ಅತ್ಯಮೂಲ್ಯವಾ ‘ಗೀತಾಪ್ರಬಂಧ’, ‘ಯೋಗ ಸಮನ್ವಯ ‘ದಿವ್ಯಜೀವನ’, ‘ಸಾವಿತ್ರಿ’ ಎಂಬ ನಾ ಉದ್ಗ್ರಂಥಗಳನ್ನು ಬರೆದರು. ಗೀತೆಯ ರಹ ವನ್ನು ಅರವಿಂದರು ಮನೋಜ್ಞವಾಗಿ ವರ್ಣಿ ಕರ್ಮಯೋಗದ ಮೂಲತತ್ವವನ್ನು ಓದುಗ ಬಿತ್ತುವಲ್ಲಿ ಯಶಸ್ವಿಯಾಗಿದ್ದಾರೆ. ಕ್ಷೇತ್ರ, ಕ್ಷೇತ್ರ ವರ್ಣನೆ ಮೋಹಕವಾಗಿದೆ. ಪತಂಜಲಿ ‘ಯೋಗಸೂತ್ರ’ ವನ್ನು ದರ್ಶಿಸುವಲ್ಲಿ ಅರವಿಂ ಪ್ರತಿಭಾಶಕ್ತಿ ತುಂಬಾ ಮಹತ್ವದ ಪಾತ್ರವಹಿಸಿ ‘ದಿವ್ಯಜೀವನ’ ಕೃತಿಯು ಪೂರ್ಣಯೋಗದ ಹಿನ್ನೆ ಯಾದ ತಾತ್ವಿಕ ದರ್ಶನವನ್ನು ವಿಸ್ತಾರವಾ ವಿವೇಚಿಸುವ ಶ್ರೇಷ್ಠಕೃತಿಯಾಗಿದೆ. ‘ಸಾವಿ ಕೃತಿಯಂತು ಮಹಾಕಾವ್ಯವೇ ಸರಿ.

ಅರವಿಂದರು ಪಾಂಡಿಚೆರಿಯಲ್ಲಿ ನಾಲ್ಕು ದಶ ಗಳ ಕಾಲ ಗುರುಜೀವನ ನಡೆಸಿ 1950 ನೆಂ ಡಿಸೆಂಬರ್ 5 ನೇ ದಿನಾಂಕ ನಡುರಾತ್ರಿ 1 ಗಂ 26 ನಿಮಿಷಕ್ಕೆ ಮಹಾಸಮಾಧಿ ಹೊಂದಿದರ ಮಹಾಯೋಗಿಯಾಗಿ, ಸ್ವಾತಂತ್ರ್ಯ ಪ್ರೇ ಯಾಗಿ, ಸಾಧನ ಪುರುಷರಾಗಿ, ರಸಋಷಿಯಾ ಮಾನವತಾವಾದಿಯಾಗಿ ಬಾಳಿ ಬೆಳಗಿದ ಶ್ರೀ ಅರವಿಂದರು ಭಾರತದ ಒಂದು ನಂದಾದೀಪ ಆ ದೀಪದ ಬೆಳಕಿನಲ್ಲಿ ನಮ್ಮ ಬದುಕಿನ ಪಥವನ್ನು ಸತ್ಯಥ ಮಾಡಿಕೊಳ್ಳೋಣ. ಮಾನವತ್ವದಿಂ ದೇವತ್ವಕ್ಕೇರೋಣ.



# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಆಡಳಿತಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

# ಶ್ರೀಕೃಷ್ಣನಿಗೆ ಚಿನ್ನದ ತೇರು

ಉಡುಪಿಯ ಕಡೆಗೋಲು ಕೃಷ್ಣ ಚಿನ್ನದ ರಥವನ್ನು ಹೊಂದಿದ ಸಂಭ್ರಮದಲ್ಲಿದ್ದಾನೆ. ಈಗಾಗಲೇ ಪಲ್ಲಕಿ, ಸುವರ್ಣ ಪಾಲಕಿ, ರಜತರಥಗಳಲ್ಲದೆ ಬ್ರಹ್ಮರಥವನ್ನೊಳಗೊಂಡು ಮೂರುರಥಗಳಿಂದ ಸಂಭ್ರಮಯಾತ್ರೆ ಕೈಗೊಳುತ್ತಿದ್ದ ಮಧ್ವ ಕರಾರ್ಚಿತ ಮುದ್ದುಕೃಷ್ಣನಿಗೆ ಚಿನ್ನದ ತೇರಲ್ಲಿ ದಿಗ್ವಿಜಯ ಯಾತ್ರೆ ಕೈಗೊಳ್ಳುವ ಕಾಲ. ಪರ್ಯಾಯ ಪೀಠವನ್ನೇರುವ ಅಷ್ಟ ಮಠದ ಪ್ರತಿಯೊಬ್ಬ ಯತಿಗಳಿಗೂ ಕೃಷ್ಣಮಠವನ್ನು ಸರ್ವಾಂಗೀಣ ಅಭಿವೃದ್ಧಿಪಡಿಸಿ; ಯಾತ್ರಿಕರಿಗೆ ಸೌಕರ್ಯವನ್ನೊದಗಿಸುವ ಮಹತ್ವಾಕಾಂಕ್ಷೆ. ಹದಿನಾಲ್ಕು ವರ್ಷಗಳ ಬಳಿಕ ಬರುವ ಎರಡು ವರ್ಷದ ಪರ್ಯಾಯ ಸರದಿಯಲ್ಲಿ ಮಹತ್ತ್ವದ ಯೋಜನೆಗಳನ್ನು ರೂಪಿಸುವ ಪರಿಪಾಠದಂತೆ ಈಗಿನ ಪರ್ಯಾಯ ಪೀಠಾಧಿಪತಿ ಫಲಿಮಾರು ಶ್ರೀ ವಿದ್ಯಾಮಾನ್ಯ ತೀರ್ಥರು ಉಡುಪಿಯ ಕೃಷ್ಣನಿಗೆ ಚಿನ್ನದ ತೇರನ್ನು ಒಪ್ಪಿಸುವ ಸತ್ಸಂಕಲ್ಪ ಹೊಂದಿದವರು.

ಹಿಂದಿನ ಪರ್ಯಾಯ ಪೀಠಸ್ಥರಾಗಿದ್ದ ಪೇಜಾವರದ ಶ್ರೀ ವಿಶ್ವೇಶ ತೀರ್ಥರು ತಮ್ಮ ಎರಡು ವರ್ಷದ ಪರ್ಯಾಯಾವಧಿಯಲ್ಲಿ ಶ್ರೀಕೃಷ್ಣ ಪ್ರತಿಷ್ಠಾ ಸಪ್ತಮ ಶತಮಾನೋತ್ಸವ; ಅಖಿಲಭಾರತ ಧರ್ಮ ಸಂಸದ್ ಸಮ್ಮೇಳನ; ಭವ್ಯಸತ್ರ ನಿರ್ಮಾಣ ಮೊದಲಾದ ಕಾರ್ಯಗಳಿಂದ ಇತಿಹಾಸ ನಿರ್ಮಿಸಿದಂತೆ, ಅವರ ಹಿರಿಯ ಗುರುಗಳಾದ ಫಲಿಮಾರು ಶ್ರೀವಿದ್ಯಾಮಾನ್ಯ ತೀರ್ಥರಿಗೆ ಮಿಗಿಲಾದ ಹೆಬ್ಬಯಕೆ. ಹದಿನಾಲ್ಕು ವರ್ಷದ ಹಿಂದಿನ ತಮ್ಮ ಪ್ರಥಮ ಪರ್ಯಾಯದಲ್ಲಿ ಶ್ರೀಕೃಷ್ಣನಿಗೆ ಭಕ್ತರ ನೆರವಿನಿಂದ ಚಿನ್ನದ ತೊಟ್ಟಿಲನ್ನು ಅರ್ಪಿಸಿದ ಶ್ರೀಗಳಿಗೆ ತಮ್ಮ ದ್ವಿತೀಯಪರ್ಯಾಯಾವಧಿಯಲ್ಲಿ ಚಿನ್ನದ ತೇರು ಸಮರ್ಪಿಸುವ ಮನೋಭಿಲಾಷೆ.

ಸಮಸ್ತ ಶ್ರೀಕೃಷ್ಣಭಕ್ತರ ಧನ–ಕನಕ ಸಹಾಯ–ಸಹಕಾರವನ್ನು ಕೋರಿ 1986 ರ ಜೂನ್ ತಿಂಗಳಲ್ಲಿ ಚಿನ್ನದ ರಥನಿರ್ಮಾಣಕ್ಕೆ ಉಡಪಿಯಲ್ಲಿ ಮುಹೂರ್ತ ನಡೆಸಿದರು. ಮದ್ರಾಸಿನ ತಮಿಳ್ನಾಡು ಕರಕುಶಲ ಅಭಿವೃದ್ಧಿ ನಿಗಮ "ಪೂಂಪುಹಾರ್"ನ ತಜ್ಞ ಶಿಲ್ಪಿಗಳ ಮಾರ್ಗದರ್ಶನದಂತೆ ನಿರ್ಮಾಣಗೊಂಡು ಅಂತಿಮ ಹಂತ ತಲುಪಿದ ಸುವರ್ಣ ರಥ ನಿರ್ಮಾಣ ಕಾರ್ಯ ತಮಿಳ್ನಾಡಿನ ಕಲಾವಿದರಾದರೂ ರಥನಿರ್ಮಾಣದ ಮಾರ್ಗದರ್ಶಕರೂ ರಥ ಶಿಲ್ಪದ ವಿನ್ಯಾಸಕಾರರು ಉಡುಪಿಯವರೇ ಆದ ಶ್ರೀ ಆರ್. ಕೆ. ಡಿಗಾರ್ ಅವರು. ಕರ್ನಾಟಕ ಶೈಲಿಗನುಗುಣವಾಗಿ ಪೂರ್ಣರೂಪು ಹೊಂದುತ್ತಿರುವ ಚಿನ್ನದ ರಥ ಕರ್ನಾಟಕ ಪರಂಪರೆಗೆ ಅದ್ವಿತೀಯ ಕೊಡುಗೆಯೆನಿಸಲಿದೆ. ದಕ್ಷಿಣ ಭಾರತದ ಪೈಕಿ ತಮಿಳ್ನಾಡಿನಲ್ಲಿ ಐದಾರು ದೇಗುಲಗಳ ಚಿನ್ನದ ರಥಗಳನ್ನು ಬಿಟ್ಟರೆ ಬೇರಾವ ರಾಜ್ಯಗಳ ದೇವಾಲಯಗಳಲ್ಲೂ ಚಿನ್ನದ ರಥ ಇದ್ದಂತಿಲ್ಲ. ಚಿನ್ನದ ರಥ ಹೊಂದುವ ಉಡುಪಿ ಕರ್ನಾಟಕದಲ್ಲೇ ಮೊತ್ತ ಮೊದಲನೆಯದಾಗಿದೆ. ಉಡುಪಿಯ ಕೃಷ್ಣನಿಗೆ ಚಿನ್ನದ ರಥ ನಿರ್ಮಿಸುವ ಕುರಿತು ಅಸಂಖ್ಯ ಭಕ್ತಜನ ಸ್ತೋಮ ಅನುದಿನ ಸಂದರ್ಶಿಸುತ್ತಿದ್ದು ಉಡುಪಿಯ ಕೃಷ್ಣ ಮಠಕ್ಕೆ ಇದು ಹೆಮ್ಮೆಯ ಆಸ್ತಿಯೆನಿಸಲಿದೆ.

ಸುಮಾರು ಹಿಂದು ಕೋಟಿ ರೂಪಾಯಿ ಅಂದಾಜು ವೆಚ್ಚದಿಂದ ನಿರ್ಮಾಣಗೊಳ್ಳುತ್ತಿರುವ ರಥ ಸುಮಾರು 25 ಕೆ.ಜಿ. ಗಿಂತಲೂ ಮಿಕ್ಕಿ ಚಿನ್ನ ಬಳಸಿಕೊಂಡಿದೆ. ರಥದ ಚಿನ್ನ ಮರದ ಮೂಲರಥಕ್ಕೆ ತಾಮ್ರದ ತಗಡು ಹೊದೆಸಿ, ಆ ಕಲಾಕೃತಿಗಳಿಗೆ ಚಿನ್ನದ ಲೇಪವನ್ನು ಎರಕ ಹೊಯ್ಯಲಾಗಿದೆ. ಪಾದರಸದ ಮೂಲಕ ಚಿನ್ನದ ದ್ರಾವಣವನ್ನು ತಾಮ್ರದ ತಗಡಿನ ಮೇಲೆ ಗಟ್ಟಿಯಾಗಿ ಅಂಟಿಕೊಳ್ಳುವಂತೆ ರಚಿಸಲಾಗಿದೆ. ಸುಮಾರು 10 ಕ್ಯೂಬಿಕ್ ಮೀಟರ್ ತೇಗದ ಮರದಲ್ಲಿ ಕೆತ್ತನೆಗೊಂಡ ರಥ ನಿರ್ಮಾಣದಲ್ಲಿ ಮದರಾಸಿನ ಕುಶಲ ಕರ್ಮಿಗಳ ಶಿಲ್ಪ ನೈಪುಣ್ಯತೆಯ ಪರಿಶ್ರಮವಿದೆ. ತಜ್ಞ ಶಿಲ್ಪಿಗಳಿಂದ ನಿರ್ಮಾಣಗೊಂಡಿರುವ ಚಿನ್ನದ ರಥಕ್ಕೆ ತಮಿಳ್ನಾಡು ಸರ್ಕಾರ ಖಾತ್ರಿ ನೀಡುತ್ತದೆ.

ಪರ್ಯಾಯ ಫಲಿಮಾರು ವಿದ್ಯಾಮಾನ್ಯ ತೀರ್ಥರ ಮನವಿಯನ್ನು ಮಾನ್ಯ ಮಾಡಿ ಅವರ ಅಭಿಮಾನಿಗಳು; ಶಿಷ್ಯರು; ಭಗವದ್ಭಕ್ತರು; ಕೃಷ್ಣಾನುಯಾಯಿಗಳು ಸ್ವಯಂಪ್ರೇರಿತರಾಗಿ ಆರ್ಥಿಕವಾಗಿ; ಚಿನ್ನದ ರೂಪದಲ್ಲೂ ತಮ್ಮ ಕಾಣಿಕೆ ಸಂದಾಯಮಾಡಿದವರಿದ್ದಾರೆ.

ಭಕ್ತರ ಆರ್ಥಿಕ ಸಹಕಾರದ ಬೆಂಬಲದಿಂದ, ಶ್ರೀ ಕೃಷ್ಣನ ದಿವ್ಯಾನುಗ್ರಹದಿಂದ ಶ್ರೀ ವಿದ್ಯಾಮಾನ್ಯರು ಯೋಜಿಸಿದ ಕಾರ್ಯವನ್ನು ಪರಿಸಮಾಪ್ತಿಯ ಅಂತಿಮ ಹಂತಕ್ಕೆ ತಂದು ನಿಲ್ಲಿಸಿದರು. ಪೂರ್ಣಗೊಂಡ ಚಿನ್ನದ ರಥವನ್ನು ತಮ್ಮ ಪರ್ಯಾಯ ಕಾಲದಲ್ಲೇ ಶ್ರೀಕೃಷ್ಣನಿಗೆ ಒಪ್ಪಿಸಬೇಕೆಂಬ ಸತ್ಸಂಕಲ್ಪದಂತೆ ಇದೇ ಜುಲೈ 5 ರಂದು ಮುಂಜಾನೆ ವಿನೂತನ ಚಿನ್ನದ ರಥದಲ್ಲಿ ಕೃಷ್ಣನನ್ನು ಕುಳ್ಳಿರಿಸಿ ರಥ ಬೀದಿಯ ಸುತ್ತ ಪ್ರದಕ್ಷಿಣೆ ಬರುವ ಮೂಲಕ ಚಿನ್ನದರಥ ಶ್ರೀಕೃಷ್ಣನಿಗೆ ಸಮರ್ಪಿತವಾಗಿದೆ. ಅಂತಹ ಪುಣ್ಯ ಸುಸಂಧಿಯನ್ನು ಕಣ್ತುಂಬ ನೋಡಿ ಪಾವನವಾಗುವುದರಲ್ಲಿ ನಿಜವಾದ ಧನ್ಯತೆಯಿದೆ, ಸಹಸ್ರಾರು ಭಕ್ತಾದಿಗಳ ಕೊಡುಗೆಗಳ ಬಿಂದು ಪರಮಾತ್ಮನ ಸನ್ನಿಧಿಯಲ್ಲಿ ಸಿಂಧುವಾಗಿ ಒಂದು ಗೂಡಿ ಅವನ ಸ್ಮರಣೆಯಲ್ಲಿ ಬದುಕಿನ ತೇರನ್ನೆಳೆದು ಭಕ್ತಿ ಭಾವದಲಿ ಕೃಷ್ಣಾರ್ಪಣವೆನ್ನುವುದರಲ್ಲಿ ಸುಖವುಂಟು.

ಶ್ರೀ ಶ್ರೀನಿವಾಸ ತಂತ್ರಿ



# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು–ಭಾಗ–2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

### ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ:

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)**
ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

(12ನೇ ಪುಟದಿಂದ)

ಹೋಯಿತು. ಅಶ್ವತ್ಥಾಮನ ಬಳಿ ಇದ್ದ ಶಿರೋಮಣಿಯನ್ನು ಪಾಂಡವರಿಗೆ ಕೊಡಿಸಿ, ಪ್ರತಿಯಾಗಿ ಪಾಂಡವರು ಅಶ್ವತ್ಥಾಮನಿಗೆ ಜೀವದಾನಮಾಡುವಂತೆ ದ್ವೈಪಾಯನರು ಹೇಳಿದರು. ಅದರಂತೆಯೇ ಇಬ್ಬರೂ ನಡೆದುಕೊಂಡರು. ಇದರಿಂದ ಆಗಲಿದ್ದ ಮಹಾ ಅನಾಹುತವೊಂದು ದ್ವೈಪಾಯನರಿಂದ ತಪ್ಪಿಸಲ್ಪಟ್ಟಿತು.

ಕುರುಕ್ಷೇತ್ರದ ಯುದ್ಧವಾದ ಮೇಲೆ ದ್ವೈಪಾಯನರು ಹಸ್ತಿನಾಪುರಕ್ಕೆ ಬಂದರು. ದುಃಖದಿಂದ ತಪ್ತನಾದ, ಧೃತರಾಷ್ಟ್ರನನ್ನು ಸಮಾಧಾನಗೊಳಿಸುತ್ತಾ – "ಈ ಯುದ್ಧ ವಿಧಿಯಿಂದ ನಿಶ್ಚಿತವಾದುದು. ನಿನ್ನ ಮಕ್ಕಳು ಇದಕ್ಕೆ ಕಾರಣರಲ್ಲ" ಎಂದು ಹೇಳಿದರು. ಅನಂತರ ಪಾಂಡವರು ಹಸ್ತಿನಾವತಿಗೆ ಬಂದು ಗಾಂಧಾರಿಯನ್ನು ನೋಡಲು ಹೋದರು. ಗಾಂಧಾರಿಗೆ ಪಾಂಡವರ ಮೇಲೆ ರೋಷವುಂಟಾಗಿತ್ತು ಅವಳು ಅವರನ್ನು ಶಪಿಸಲೂ ಉದ್ದೇಶಿಸಿದ್ದಳು. ದ್ವೈಪಾಯನರಿಗೆ ಗಾಂಧಾರಿಯ ತಪಃಪ್ರಭಾವ ಗೊತ್ತಾಗಿತ್ತು. ಪತಿವ್ರತೆಯಾದ ಅವಳ ಶಾಪ ನಿಷ್ಫಲವಾಗದೆಂಬುದೂ ಅವರಿಗೆ ತಿಳಿದಿತ್ತು. ಹಾಗಾಗಿ ಸುದ್ದಿ ತಿಳಿದ ಕೂಡಲೆ ಅವರು ಗಾಂಧಾರಿಯ ಬಳಿ ಬಂದು, ಶಾಪ ಕೊಡದಂತೆ ತಡೆದರು. ಇಲ್ಲವಾದ್ದಲ್ಲಿ ಅವಳ ಶಾಪಕ್ಕೆ ಗುರಿಯಾಗಿ ಪಾಂಡವರು ನಾಶವಾಗಿ ಬಿಡುತ್ತಿದ್ದರು.

ಹಸ್ತಿನಾವತಿಯ ಚಕ್ರವರ್ತಿಯಾಗಿ ಅಭಿಷಿಕ್ತನಾದ ಮೇಲೂ, ಯುಧಿಷ್ಠಿರನಿಗೆ ಹರ್ಷವುಂಟಾಗಲಿಲ್ಲ. ಬಂಧು ಬಾಂಧವರನ್ನು ಕಳೆದುಕೊಂಡವನು ಸದಾ ದುಃಖಿಸುತ್ತಲೇ ಇದ್ದ. ದ್ವೈಪಾಯನರು ಹಸ್ತಿನಾವತಿಗೆ ಬಂದು, ಕೆಲಕಾಲ ಇಲ್ಲೇ ಇದ್ದು ಯುಧಿಷ್ಠಿರನನ್ನು ಸಮಾಧಾನಗೊಳಿಸುತ್ತಿದ್ದರು. ಶಂಖಲಿಖಿತರ ಕಥೆಯ ಮೂಲಕ ಧರ್ಮಪಾಲನೆಯ ಮಹತ್ವವನ್ನೂ, ಹಯಗ್ರೀವನ ಕಥೆಯ ಮೂಲಕ ರಾಜನ ಕರ್ತವ್ಯವನ್ನೂ, ಸೇನಜಿತನ ಕಥೆಯ ಮೂಲಕ ತ್ಯಾಗದ ಮಹತ್ವವನ್ನೂ ಬೋಧಿಸಿದರು. ಆದರೂ ಯುಧಿಷ್ಠಿರನಿಗೆ, ಮೃತರಾದ ಬಂಧು ಬಾಂಧವರನ್ನು ನೆನೆದಾಗ, ದುಃಖ ಒತ್ತರಿಸಿ ಬಂದು ಬಿಡುತ್ತಿತ್ತು. ಅನಿತ್ಯವಾದ ಈ ಶರೀರವನ್ನು ತ್ಯಾಗಮಾಡಿ ಬಿಡಬೇಕು ಎಂದೂ ಒಮ್ಮೊಮ್ಮೆ ಅನ್ನಿಸಿಬಿಡುತ್ತಿತ್ತು. ಅಂತಹ ಸಮಯಗಳಲ್ಲಿ ದ್ವೈಪಾಯನರು ಬಳಿಯೇ ಇದ್ದು, ಕಥೆಗಳಿಂದ, ವೇದಾಂತವಿಷಯಗಳಿಂದ ಅವನ ಮನಸ್ಸನ್ನು ಹಗುರಗೊಳಿಸುತ್ತಿದ್ದರು.

ಇಷ್ಟಾದರೂ ಧರ್ಮರಾಜನ ಮನಸ್ಸು ದುಗುಡದಿಂದಲೇ ಕೂಡಿತ್ತು. ಅವನ ಮನಃಶಾಂತಿಗಾಗಿ, ದ್ವೈಪಾಯನರು, ಅಶ್ವಮೇಧಯಾಗವನ್ನು ಮಾಡಲು ಸಲಹೆ ಮಾಡಿದರು. ಯಾಗಕ್ಕಾಗಿ ಧನವನ್ನು ಹೇಗೆ ಒದಗಿಸಿಕೊಳ್ಳಬೇಕೆಂಬುದನ್ನೂ ಸೂಚಿಸಿದರು. ಯಾಗದ ಕುದುರೆಯ ರಕ್ಷಣೆಗೆ ಅರ್ಜುನನನ್ನೂ, ರಾಜ್ಯ – ನಗರಗಳ ರಕ್ಷಣೆಗೆ ಭೀಮ ನಕುಲರನ್ನೂ, ಕುಟುಂಬ ಪಾಲನೆಗೆ ಸಹದೇವನನ್ನೂ ನೇಮಿಸಬೇಕೆಂದು ವ್ಯವಸ್ಥೆ ಮಾಡಿದರು. ದ್ವೈಪಾಯನರು ಯಾಗ ಪೂರ್ಣಗೊಳ್ಳುವವರೆಗೂ ಹಸ್ತಿನಾವತಿಯಲ್ಲಿಯೇ ಇದ್ದರು. ಯಾಗಕಾರ್ಯವು ಪೂರ್ಣಗೊಂಡನಂತರ ಧರ್ಮರಾಜನ ಮನಸ್ಸು ಸಂಪೂರ್ಣವಾಗಿ ಸಮಾಧಾನವನ್ನು ಪಡೆದಿತ್ತು. ಇದನ್ನರಿತ ದ್ವೈಪಾಯನರು ತಪಸ್ಸಿಗಾಗಿ ಆಶ್ರಮಕ್ಕೆ ಹಿಂತಿರುಗಿದರು.

ಕೆಲವು ವರ್ಷಗಳು ಕಳೆದುವು. ಧೃತರಾಷ್ಟ್ರ ಗಾಂಧಾರಿ ಕುಂತಿ – ಮುಂತಾದವರು ತಪಸ್ಸು ಮಾಡಿ ದೇಹತ್ಯಾಗ ಮಾಡುವ ಉದ್ದೇಶದಿಂದ ಕಾಡಿಗೆ ಹೋದರು. ಅವರು ಗಂಗಾನದಿಯ ಬಳಿ ಆಶ್ರಮವೊಂದನ್ನು ಸ್ಥಾಪಿಸಿಕೊಂಡು ಕೆಲಕಾಲ ಇದ್ದರು. ಇದನ್ನು ತಿಳಿದ ದ್ವೈಪಾಯನರು, ಧೃತರಾಷ್ಟ್ರಾದಿಗಳನ್ನು ನೋಡಲು ಬಂದರು. ಸಾಯುವ ಮುನ್ನ ಹತರಾದ ತಮ್ಮ ಮಕ್ಕಳನ್ನೂ ಬಂಧು ಬಾಂಧವರನ್ನೂ ನೋಡಬೇಕೆಂದು ಗಾಂಧಾರಿ ಕುಂತಿಯರು ಬಯಸಿದರು. ದ್ವೈಪಾಯನರು ಧೃತರಾಷ್ಟ್ರಾದಿಗಳಿಗೆ, ಅವರ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿದರು. ಅನಂತರ ಅವರೆಲ್ಲರನ್ನೂ ಗಂಗಾನದಿಯ ಬಳಿಗೆ ಕರೆದೊಯ್ದರು. ಆ ದಿನ ರಾತ್ರಿ ತಮ್ಮ ತಪಃಶಕ್ತಿಯಿಂದ ಕುರುಕ್ಷೇತ್ರ ಯುದ್ಧದಲ್ಲಿ ಸತ್ತವರೆಲ್ಲರೂ ಸಜೀವರಾಗಿ ಸಾಲಂಕೃತರಾಗಿ ಕಾಣಿಸಿಕೊಳ್ಳುವಂತೆ ಮಾಡಿದರು. ಧೃತರಾಷ್ಟ್ರ ಗಾಂಧಾರಿ ಕುಂತಿ– ಇವರು ಮೃತರಾದ ಮಕ್ಕಳು, ಬಾಂಧವರು– ಮುಂತಾದವರೊಡನೆ ಸಂತೋಷದಿಂದ ಆ ರಾತ್ರಿಯನ್ನು ಕಳೆದರು. ಬೆಳಗಾಗುತ್ತಲೇ ಅವರೆಲ್ಲ ಮಾಯವಾದರು. ಧೃತರಾಷ್ಟ್ರಾದಿಗಳಿಗೆ ಈಗ ಮಾನಸಿಕ ಸಮಾಧಾನ ದೊರಕಿತು, ಅಲ್ಲದೆ ಅವರು ಲೌಕಿಕವಾದ ಆಸೆಗಳನ್ನು ತೊರೆದು, ಮುಕ್ತಿಸಾಧನೆಯತ್ತ ಸಾಗಲು ಸಿದ್ಧರಾದರು. ಅನಂತರ ಅವರೆಲ್ಲ ದ್ವೈಪಾಯನರಿಂದ ಬೀಳ್ಕೊಂಡು ಗಂಗಾನದಿಯನ್ನು ದಾಟಿ ಮುಂದಕ್ಕೆ ಹೋದರು. ಇತ್ತ ದ್ವೈಪಾಯನರು ತಮ್ಮ ಆಶ್ರಮಕ್ಕೆ ಬಂದರು.

ಶ್ರೀ ಕೃಷ್ಣನ ನಿರ್ಯಾಣಾಂತರ, ಅರ್ಜುನ ದ್ವೈಪಾಯನರ ಆಶ್ರಮಕ್ಕೆ ಬಂದು, ಅವರಿಗೆ ನಡೆದ ಎಲ್ಲ ಸಮಾಚಾರವನ್ನೂ ತಿಳಿಸಿದನು. ಆಗ ಭವಿಷ್ಯವನ್ನು ಜ್ಞಾನದೃಷ್ಟಿಯಿಂದ ತಿಳಿದ, ಅವರು, ಪರೀಕ್ಷಿತನಿಗೆ ರಾಜ್ಯವಹಿಸಿ, ಪಾಂಡವರು ಮಹಾಪ್ರಸ್ಥಾನ ಮಾಡುವಂತೆ ಸೂಚಿಸಿದರು. ಅವರ ಸಲಹೆಯಂತೆ ಪಾಂಡವರು ಪರೀಕ್ಷಿತನಿಗೆ ರಾಜ್ಯವನ್ನು ವಹಿಸಿ ವನಕ್ಕೆ ಹೋಗಿ, ಸ್ವರ್ಗಾರೋಹಣ ಮಾಡಿದರು.

ಮಹಾಭಾರತದ ಕರ್ತೃ ದ್ವೈಪಾಯನರೇನೋ ನಿಜ. ಆದರೆ ಇಲ್ಲಿ ಅವರು ಕೇವಲ ಕಥೆ ಹೇಳುವವರಾಗಿಲ್ಲ; ಆ ಕಥೆಯ ಪಾತ್ರಗಳಲ್ಲಿ ತಾವೂ ಒಬ್ಬರಾಗಿದ್ದಾರೆ; ಕಥೆಯ ಹಂದರದ ಹಾಸುಹೊಕ್ಕುಗಳಲ್ಲಿ ಬೆರೆತು ಹೋಗಿದ್ದಾರೆ; ಅನೇಕ ಘಟನೆಗಳ ಪ್ರೇರಕರಾಗಿದ್ದಾರೆ; ಪೋಷಕರಾಗಿದ್ದಾರೆ; ಈ ಕಥೆಯನ್ನು ವಿಶ್ವದ ಶ್ರೇಷ್ಠ ಕಥೆಯನ್ನಾಗಿಸಿ ಅಜರಾಮರಗೊಳಿಸಿದ್ದಾರೆ.

ವ್ಯಾಸರೆಂದು ಪ್ರಸಿದ್ಧರಾಗಿರುವ ದ್ವೈಪಾಯನರು ಚಿರಂಜೀವಿಗಳು. ಪ್ರಾತಃಸ್ಮರಣೀಯರಾದ ಚಿರಂಜೀವಿ ಸಪ್ತಕರಲ್ಲಿ ಅವರೂ ಒಬ್ಬರು. ರಾಮಾಯಣದ ಕಥೆ ನಡೆಯುವಲ್ಲಿ ಆಂಜನೇಯನು ಬಂದು ನಿಂತು ನಲಿದಾಡುವಂತೆ, ಮಹಾಭಾರತದ ಕಥೆ ನಡೆಯುವಲ್ಲಿ ದ್ವೈಪಾಯನರು ಬಂದು ಆಲಿಸಿ ನಲಿದಾಡುತ್ತಾರೆ. ಎಂಬ ಮಾತು ಇಂದಿಗೂ ಸತ್ಯವಾಗಿದೆ.

ತೇಜಶ್ಶರೀರಿಗಳೂ ಚಿರಂಜೀವಿಗಳೂ ಆದ ದ್ವೈಪಾಯನರು ಜಗತ್ತಿಗೆ ಸನ್ಮಂಗಳವನ್ನುಂಟು ಮಾಡಲಿ.

ನಮೋಸ್ತು ತೇ ವ್ಯಾಸ ವಿಶಾಲ ಬುದ್ಧೇ ।
ಫುಲ್ಲಾರವಿಂದಾಯತ ಪತ್ರ ನೇತ್ರ ।
ಯೇನ ತ್ವಯಾ ಭಾರತ ತೈಲ ಪೂರ್ಣಃ ।
ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ ॥

**ಕೂಡಲಿ ಜಗನ್ನಾಥಶಾಸ್ತ್ರಿ**



## ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

### ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

### ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

### ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಗೋಪೀಗೀತೆ

ಕೃಷ್ಣ! ನಿನ್ನ ಜನನದಿಂದ ನಮ್ಮ
ನಾಡು ಪರಮ ಪುಣ್ಯಭೂಮಿಯಾಯಿತು;
ಲಕ್ಷ್ಮೀದೇವಿ ನೆಲಸಿ ನಿಂತಳಿಲ್ಲಿಯೇ;
ಪ್ರಾಣಕಾಂತ ನಿನ್ನನರಸಿ ಸೋತೆವು
ಕಣ್ಣ ಕುಡಿಯ ನೋಟ ಬೀರಿ ಕರುಣಿಸೋ ॥ ೧ ॥

ಶರತ್ಕಾಲದುದಕ ಪದ್ಮ ಪಟಲದ
ಸೊಬಗ ಗೆಲ್ವ ನಿನ್ನ ನಯನದಂಡವು
ಸೆಳೆಯುಲೋಡಿ ಬಳಲಿ ಬಂದ ಮೌಲ್ಯ-
ಹೀನರೆಮ್ಮ ದಾಸಿಗಣವ ನೇತಕೆ,
ಸುರತನಾಥ! ದೂರ ತಳ್ಳಿ ಕೊಲ್ಲವೆ? ॥ ೨ ॥

ವಿಷದ ಜಲದಪಾಯ ನೀಗಿ ಸಲಹಿದೆ
ಸರ್ಪರೂಪದಘನ ಕಾಟ ತಪ್ಪಿಸಿ
ಜಡಿವ ಸಿಡಿಲು ಮಳೆಯ ವೃಷಭನಸುರನ
ಭಯನ ಕಳೆದು ತಲೆಯ ಕಾಯ್ದ ಕೃಷ್ಣನೇ!
ನಮ್ಮ ನಿಂದು ಕೈಯ ಬಿಡುವುದೇತಕೊ? ॥ ೩ ॥

ನಿಜದಿ ನೀನೆಶೋದೆ ಕಂದನಲ್ಲವು,
ಸಕಲ ಜೀವ ಜಾಲದಂತರಾತ್ಮನ!
ಲೋಕಪಿತನ ಮೊರೆಯ ಕೇಳಿ ಜನಿಸಿದೆ;
ವೃಷ್ಣಿ ತಿಲಕ ಲೋಕ ರಕ್ಷಕ
ಇಂತು ನಮ್ಮನೇಕೆ ಕೃಷ್ಣ ಕಾಡುವೆ ॥ ೪ ॥

ಗೋಪ ಕುಲದ ವೀರ ಸಿಂಹ ಪೋತನೆ
ಭವದ ಚಕ್ರದೊಳಗೆ ಸುತ್ತಿ ಸೋತೆವು
ನಿಮ್ಮ ಚರಣ ಕಮಲಕೆರಗಿ ಬಂದೆವು
ಶ್ರೀಕರಾಗ್ರವೆಮ್ಮ ಶಿರದೊಳಿಡುತ
ಅಭಯವಿತ್ತು ಪೊರೆವುದಾರ್ತ ರಕ್ಷಕ ॥ ೫ ॥

ವ್ರಜ ಜನಾರ್ತಿಹರನೆ ಸಲಹೊ ನಮ್ಮನು
ಮಂದಹಾಸ ಸೂಸಿ ಮದವ ಮುರಿದೆಯೊ
ಗೆರೆಯ ನಗೆಯ ತೋರಿ ಮನವ ಸೆಳೆದೆಯೊ
ಕೃಷ್ಣ ಗೋಪಿ ಗಣವ ದಾಸ್ಯ ಕೂಡಿದೆ
ವನರುಹಾಕ್ಷ ತೋರು ಲಲಿತ ವದನವ ॥ ೬ ॥

ಪಾದ ಕಮಲಕೆರಗಿ ಬಂದ ಭಕ್ತರ
ಪಾಪ ಕಳೆದು ಗೋವ ಕಾಯ್ವ ಕೃಷ್ಣನೆ
ಫಣಿಯ ಮೆಟ್ಟಿ ಕುಣಿದ ಶ್ರೀನಿಕೇತನ
ಲಲಿತ ಪದವನೆಮ್ಮ ಕುಚಕೆ ಸೋಂಕಿಸಿ
ಕೃಷ್ಣ ಕಳೆಯೊ ನಮ್ಮ ಹೃದಯ ತಾಪವ ॥ ೭ ॥

ಸರಸವಾಡಿ ಬುಧರ ಮನವ ಗೆಲಿದೆಯೊ
ಸರಸಿಜಾಕ್ಷ ನಿನ್ನ ಮಧುರವಾಣಿಯು
ಇಂಪ ನಿತ್ತು ಮನಕೆ ಮೋಹ ಜನಕವು
ನಿನ್ನ ಮುದ್ದು ನುಡಿಗೆ ಮಾರು ಹೋದೆವು
ಅಧರ ಸುಧೆಯನಿತ್ತು ಬದುಕಿಸೆಮ್ಮನು ॥ ೮ ॥

ಕೃಷ್ಣ ಚರಿತೆ ದುಃಖಿಗಮೃತ ಸೇಚನ
ಕವಿಗಳೊಲಿದು ನುತಿಸೆ ಪಾಪ ಸೂದನ
ಶ್ರವಣ ಸುಧೆಯು ಶುಭವ ನೀಡಿ ಪೊರೆವುದು
ದಿವಿಜರಮೃತ ರಸವ ಕೃಷ್ಣ ಮೀರಿಸೆ
ಭುವಿಯ ಸುಕೃತಿ ಗಳಿಗೆ ಮಾತ್ರ ಮೀಸಲು ॥ ೯ ॥



ಮಂದಹಾಸ ಕೀವಿ ದೊಲವ ನೋಟವು
ಅಂತರಂಗವರಿತ ಲಲಿತ ಲಾಸ್ಯವು
ಕರುಣೆ ತೋರಿ ನಮಗೆ ಕೊಟ್ಟ ಭಾಷೆಯು
ನಮ್ಮ ಮನವ ಕಲಕಿ ಮೋಹಗೊಳಿಸಿವೆ
ಕಪಟ ಕಥೆಯು ಕೇಳಿ ಹೃದಯ ತಣಿವುದೆ? ॥ ೧೦ ॥

ಕೃಷ್ಣ ತುರುವ ಕಾಯಲಡವಿಗೈದಿದೆ
ಕರಿಕೆ ಮೊನೆಗಳರ್ಚಿ ನಳಿನಸುಂದರ
ಪಾದ ಕಮಲವೆನಿತು ನೊಂದು ನಲುಗಿತೊ
ನೆನೆಯಲೆಮ್ಮ ಹೃದಯ ಕರಗಿ ಪೋಪುದು
ಮರುಗುವೆಮ್ಮ ಮನವ ನರಿಯಲಾರೆಯ? ॥ ೧೧ ॥

ನೇಸರಿಳಿಯಲಡವಿಯಿಂದ ಬರುತಿರೆ
ಕುಸುಮ ರಜವು ಕವಿದ ನೀಲ ಕುಂತಳ
ಕೆದರಿ ನೊಸಲ ಮೇಲೆ ಜೋಲ್ದು ನಲಿಯಲು
ಹೃದಯ ಕಾಂತ ಕೃಷ್ಣ ಮನವ ಸೆಳೆಯಲು
ಕಪಟ ನಾಟ್ಯವಾಡಿ ಮಾಯವಾದೆಯೊ ॥ ೧೨ ॥

ಪಾದ ಪದ್ಮ ಕೆರಗಿ ಬಂದ ಭಕ್ತರ
ಬಯಕೆ ಸಲಿಸಿ ಪೊರೆವ ಕಾಮ ಧೇನುವೆ
ಪಿತಾಮಹಾರ್ಚಿತ, ಭುವನ ಭೂಷಣ,
ಕಷ್ಟ ಕಳೆವ ಕೃಷ್ಣ ಚಿಂತನಾರ್ಹನೆ
ಎದೆಗೆ ಪದವನೊತ್ತಿ ಕಳೆಯೊ ತಾಪವ ॥ ೧೩ ॥

ಸುರತನಾಥ ಕೃಷ್ಣ, ಶೋಕನಾಶಕ
ನರರ ಕಾಮಹರನೆ, ಮೋಹ ಮುದ್ಗರ
ಮನವ ಸೂರೆಗೊಳುವ ಮಧುರ ಗಾನದ
ಕೊಳಲನೂದಿ ಅಧರ ಸುಧೆಯ ಸೂಸುತ
ಸವಿಯ ನಮಗೆ ನೀಡದಿರುವುದೇತಕೊ? ॥ ೧೪ ॥

ದಿನವ ಮಂದೆಯೊಡನೆ ಕಳೆವೆ ಬನದೊಳು
ಕೃಷ್ಣ ನಿನ್ನ ವದನ ಕಮಲ ಕಾಣದೆ
ಕ್ಷಣವನೊಂದು ಯುಗದವೋಲು ಕಳೆವೆವು
ನೇಸರಿಳಿಯೆ ಕುಂತಳಾಸ್ಯ ಕಾಣೆವು
ವಿಧಿಯದೇಕೆ ಕಣ್ಣಿಗೆವೆಯ ನಿತ್ತನೊ? ॥ ೧

ಇನಿಯನಣ್ಣನಣುಗ ನಂಟರಿಪ್ಪರ
ತೊರೆದು ನಿನ್ನ ಕೊಳಲಿನಿಂಪನಾಲಿಸಿ
ಕೃಷ್ಣ ನಿನ್ನ ಸುಳಿವನರಸಿ ಬಂದೆವು
ಚ್ಯುತಿಯನರಿಯದಿರ್ಪ ನಿತ್ಯಮೋಹನ
ಕಿತವನಾವ ನೆಮ್ಮ ತೊರೆವನಿರುಳೊಳು? ॥ ೧

ಮಂದಹಾಸ ಭರಿತ ಸುಂದರಾನನ
ಪ್ರಣಯ ಮಧುರ ಕೃಷ್ಣ ಮಂಜುಳೇಕ್ಷಣ
ಲಕ್ಷ್ಮಿಗುರವ ನಿತ್ತ ಶ್ರೀ ನಿಕೇತನ
ದಲಿತ ಮನದೊಳಡಗಿ ಮೋಹ ಕೆರಳಿಸಿ
ಭ್ರಮೆಯ ಪಾಶ ಬೀಸಿ ಮಾಯವಾದೆಯ? ॥ ೧

ಗೋಪ ಕುಲದ ವಿರಹ ತಾಪ ಭಂಜಕ
ಸಕಲ ಜಗಕೆ ಕೃಷ್ಣ ಕುಶಲ ದಾಯಕ
ಸಂಗ ಸುಖದಿ ಕಳೆಯೊ ಮನದ ನೋವನು
ಕರಣ ಮೂರನೆಲ್ಲ ನಿನ್ನೊಳಿಟ್ಟೆವು
ನೀನೆ ನಾವು ನಾವೆ ನಿನ್ನೊಳಾದೆವು ॥ ೧

ಕೋಮಲಾಂಗ ನಿನ್ನ ಚರಣ ಕಮಲವ
ನಮ್ಮ ಕಠಿನ ಕುಚದ ಮೇಲೆ ನೀನಿಡೆ
ನೋವ ಕಾಂಬುದೆಂದು ಮನದಿ ನೊಂದೆವು
ಕೃಷ್ಣ ಮುಳ್ಳಿನಡವಿಯೊಳಡಿಯನಿಡದೆ
ಕಳೆಯೊ ನಿನ್ನಧೀನರೆಮ್ಮ ನೋವನು ॥ ೧

---

—ಭಾಗವತದಿಂದ ಅನುವ

ಶ್ರೀ ಕೆ. ದೊರೆಸ್ವಾಮಿಅಯ್ಯಂಗಾರ್

---



# ಶಂಖದ ಹಿರಿಮೆ

ಸಮುದ್ರಗರ್ಭದಿಂದ ಪ್ರಾಪ್ತವಾದ ಶಂಖವು ಭಾರತೀಯರಿಗೆ ಧಾರ್ಮಿಕವಿಧಿವಿಧಾನಗಳಲ್ಲಿ ಮಾತ್ರ ಮಹತ್ವ ಪೂರಿತವಾದುದೆಂದು ಹೇಳುವಂತಿಲ್ಲ. ವೈಜ್ಞಾನಿಕ ಲೋಕದಲ್ಲಿಯೂ ಅದು ತನ್ನ ವ್ಯಾಪ್ತಿಯನ್ನು ಸಾಕಷ್ಟು ಬೆಳೆಸಿಕೊಂಡಿದೆ. ಈ ಮಾತನ್ನು ಅಭ್ಯಾಸಬಲದಿಂದ ತಿಳಿದುಕೊಳ್ಳಬಹುದು.

ಶಂಖವನ್ನು ಕಣ್ಣಿಗೆ ಸ್ಪರ್ಶಮಾಡಿಕೊಳ್ಳುವುದರಿಂದ ಕಣ್ಣುಗಳ ಕಾಂತಿಯು ಹೆಚ್ಚುಸತ್ತದೆ. ಇಂಥ ವೈಜ್ಞಾನಿಕ ಪ್ರಯೋಜನವನ್ನು ಅರಿಯಬೇಕಿದ್ದಲ್ಲಿ ನಾವು ಬಳಸುವ ಪದಾರ್ಥವು ಅಪ್ಪಟವಾದುದೋ ಅಥವಾ ಕೃತ್ರಿಮವಾದುದೋ ಎಂಬುದನ್ನು ತಿಳಿದುಕೊಳ್ಳಬೇಕಾದುದು ಅಗತ್ಯ.

ವಿಷ್ಣುರೂಪವನ್ನು ಅನಿರುದ್ಧ, ಪ್ರದ್ಯುಮ್ನ, ವಾಸುದೇವ, ನಾರಾಯಣ ಎಂಬ ನಾಲ್ಕು ರೂಪಗಳಲ್ಲಿ ಪೂಜಿಸುವುದುಂಟು. ಎಲ್ಲವೂ ವಿಷ್ಣು ರೂಪವೇ. ಈ ಎಲ್ಲರೂಪಗಳಲ್ಲಿ ಪ್ರತಿಮೆಗಳ ಕೈಯಲ್ಲಿ ಶಂಖವಿರುವುದನ್ನು ನಾವು ಗಮನಿಸಬಹುದು. ಇನ್ನು ಪ್ರತಿಮಾಲಕ್ಷಣ ಹಾಗೂ ಶಿಲ್ಪಶಾಸ್ತ್ರಕ್ಕನುಸಾರವಾಗಿ ಈ ಶಂಖವು ಕೆಲವು ಸಂದರ್ಭದಲ್ಲಿ ಬಲಕೈ ಅಥವಾ ಎಡಗೈಯಲ್ಲಿ ಹಿಡಿದಿರುವ ಚಿತ್ರವನ್ನು ನಾವು ಕಾಣಬಹುದು.

ಶಂಖವು ಶ್ರೀ ಸಾನ್ನಿಧ್ಯದಿಂದ ಯುಕ್ತವಾದುದೆಂದು ಪ್ರತೀತಿ.ಮಹಾಭಾರತದಲ್ಲಿ ಕುರುಪಾಂಡವ ಯುದ್ಧಾರಂಭ ಕಾಲದಲ್ಲಿ ಶ್ರೀಕೃಷ್ಣನೇ ಮೊದಲು ಬಾರಿ ಕುರುಕ್ಷೇತ್ರದಲ್ಲಿ ಎಲ್ಲರಿಗೂ ಕೇಳುವಂತೆ ಶಂಖಧ್ವನಿ ಮಾಡಿದನೆಂಬ ಮಾತು ಗೀತಾಭ್ಯಾಸದಿಂದ ತಿಳಿದುಬರುತ್ತದೆ. ಶ್ರೀಕೃಷ್ಣನ ಶಂಖಧ್ವನಿಯಾದ ನಂತರ ಇನ್ನುಳಿದ ಯೋಧರು ತಮ್ಮ ತಮ್ಮ ಶಂಖಗಳನ್ನು ಧ್ವನಿಮಾಡಿದರೆಂಬ ಉಲ್ಲೇಖವಿದೆ.

ಶಂಖಧ್ವನಿಯು ಮಹಾಮಂಗಳಕಾರಕವಾದುದು, ಪರಮ ಪವಿತ್ರವಾದುದು ಎಂಬ ಭಾವನೆಯಿಂದ ಅದನ್ನು ಹೋಮ ಹವನಾದಿಕಾರ್ಯಗಳಲ್ಲಿಯೂ ಪೂಜಾದಿ ಕಾರ್ಯಗಳು ನಡೆವಾಗಲು ವಿವಾಹ ಕಾರ್ಯದಲ್ಲಿಯೂ ಧ್ವನಿಮಾಡುವ ಸಂಪ್ರದಾಯವಿದೆ. ಅದರಲ್ಲಿಯೂ ಸಹ ಸಮುದ್ರ ಕರಾವಳಿಯ ಪ್ರದೇಶದಲ್ಲಿ ಇದರ ಬಳಕೆ ಹೆಚ್ಚು. ಬಂಗಾಲದಲ್ಲಿ ಸ್ತ್ರೀಯರು ಸಾಮೂಹಿಕವಾಗಿ ಮಂಗಲಕಾರ್ಯದಲ್ಲಿ ಶಂಖವನ್ನೂದುವುದುಂಟು.

ಶಂಖದಿಂದ ಹೊರಹೊಮ್ಮಿದ ಧ್ವನಿಯು ಎಲ್ಲಿಯವರೆಗೆ ಪಸರಿಸುತ್ತದೆಯೋ ಅಲ್ಲಿಯವರೆಗೆ ಆ ಪ್ರದೇಶದಲ್ಲಿರು ರೋಗಾಣುಗಳೆಲ್ಲ ನಾಶವಾಗುತ್ತವೆ. ಈ ಮಾತನ್ನು ಶ್ರೀ ಜಗದೀಶಚಂದ್ರ ಬಸು ಹೇಳುತ್ತಾರೆ.

ಆಯುರ್ವೇದವು ಪಂಚಮವೇದವೆನಿಸಿದೆ. ಈ ಗ್ರಂಥದ ನಾಲ್ಕನೆಯ ಖಂಡದ ಹತ್ತನೆಯ ಅಧ್ಯಾಯದಲ್ಲಿ ಶಂಖದಲ್ಲಿ ಆಕಾಶ, ವಾಯು, ಜ್ಯೋತಿರ್ಮಂಡಲ, ಹಾಗೂ ಸುವರ್ಣ ಕಾಂತಿಯುಕ್ತವಾದುದೆಂದು ಹೇಳಲಾಗಿದೆ. ಶತ್ರುಗಳನ್ನು ನಿರ್ಬಲಗೊಳಿಸುವ ಶಕ್ತಿ ಅದರ ಧ್ವನಿಯಲ್ಲಿದೆ. ರಾಕ್ಷಸ, ಪಿಶಾಚಗಳನ್ನು ಅದು ವಶೀಕರಣಗೊಳಿಸುತ್ತದೆ, ಅಜ್ಞಾನ, ದಾರಿದ್ರ್ಯ, ಹಾಗೂ ಸಂಕಟಗಳನ್ನು ನಿವಾರಣೆ ಮಾಡುತ್ತದೆ. ಆಯುಷ್ಯವನ್ನು ಅಭಿವೃದ್ಧಿಗೊಳಿಸುತ್ತದೆ. ಆಯುರ್ವೇದದಲ್ಲಿ ಹೇಳಲಾದ ಈ ಮಾತುಗಳೆಲ್ಲವನ್ನೂ ಇಂದು ವೈಜ್ಞಾನಿಕರೂ ಒಪ್ಪುತ್ತಲಿದ್ದಾರೆ. ಪ್ರಯೋಗಾದಿಗಳಿಂದ ಈ ಮಾತನ್ನು ಸಿದ್ಧಪಡಿಸುತ್ತಿದ್ದಾರೆ

ಆಯುರ್ವೇದದಂತೆ ಇತರ ಪ್ರಾಚೀನ ಗ್ರಂಥಗಳಲ್ಲಿಯೂ ಕೂಡ ಶಂಖವನ್ನು ಕುರಿತು ವರ್ಣಿಸುವಾಗ ತ್ರಿಲೋಕದಲ್ಲಿರುವ ಎಲ್ಲ ಪುಣ್ಯ ತೀರ್ಥಗಳು ಇದರಲ್ಲಿ ಉಪಲಬ್ಧವಾಗಿವೆ ಎಂದು ಹೇಳಲಾಗಿದೆ. ಪವಿತ್ರವಾದ ಶಂಖ ಸ್ಪರ್ಶಮಾತ್ರದಿಂದ ಮಾನವನ ಸಕಲ ಪಾಪಗಳು ದೂರಾಗುವವೆಂದು ಹೇಳಿರುವುದುಂಟು.

ದೇವದಾನವರಿಬ್ಬರೂ ಕೂಡಿಕೊಂಡೇ ಸಮುದ್ರ ಮಂಥನ ಕಾರ್ಯವನ್ನಾರಂಭಿಸಿದರು. ಆಗ ಸಮುದ್ರಗರ್ಭದಿಂದ ಹದಿನಾಲ್ಕು ರತ್ನಗಳನ್ನು ಅವರು ಕಂಡರು. ಈ ಹದಿನಾಲ್ಕು ರತ್ನಗಳಲ್ಲಿ ಶಂಖವು ಒಂದು. ಅದರಂತೆ ನವನಿಧಿಗಳಲ್ಲಿ ಈ ಶಂಖವೂ ಕೂಡ ಒಂದು ದಿವ್ಯವಾದ ನಿಧಿಯಾಗಿ ಅವರಿಗೆ ಲಭಿಸಿತು.

ಪುರಾಣಗಳಲ್ಲಿಯೂ ಕೂಡ ಶಂಖೋತ್ಪತ್ತಿಯ ವಿಚಾರವನ್ನು ನಾವು ಕಾಣಬಹುದು. ಮಹಾನುಭಾವನಾದ ರುದ್ರದೇವ ಒಂದು ಸಂದರ್ಭದಲ್ಲಿ ಶಂಖಚೂಡ ಎಂಬ ದೈತ್ಯನೊಂದಿಗೆ ಹೋರಾಡುವ ಪ್ರಸಂಗ ಬಂದಿತು. ಆಗ ತನಗೆ ವಿಷ್ಣುವಿನಿಂದ ಕೊಡಲ್ಪಟ್ಟ ತ್ರಿಶೂಲವನ್ನು ಶಂಖಚೂಡನ ಮೇಲೆ ಪ್ರಯೋಗ ಮಾಡಿದ. ಅದರಿಂದ ಆ ದೈತ್ಯನು ಹತನಾದ. ಮುಂದೆ ಕಾಲಾಂತರದಲ್ಲಿ ಆತನ ಅವಶೇಷಗಳೇ ಶಂಖದ ರೂಪವನ್ನು ತಾಳಿದವು. ಈ ಮಾತು ಬ್ರಹ್ಮವೈವರ್ತ ಪುರಾಣದ ಪ್ರಕೃತಿ ಖಂಡದ ಹದಿನೆಂಟನೆ ಅಧ್ಯಾಯದಲ್ಲಿ ನಮಗೆ ಕಾಣಸಿಗುತ್ತದೆ.

ಶ್ರೀ ಆದ್ಯರಾಮಾಚಾರ್ಯ

ಈ ಶಂಖಗಳಲ್ಲಿ ಪ್ರಧಾನವಾಗಿ ಎರಡು ಪ್ರಕಾರಗಳಿವೆ. ಅದರಲ್ಲಿಯ ಒಂದಕ್ಕೆ ಬಲಮುರಿ ಎಂದು ಕರೆದರೆ ಇನ್ನೊಂದಕ್ಕೆ ಎಡಮುರಿ ಶಂಖವೆಂದು ಗುರುತಿಸುವದುಂಟು. ಶಂಖದ ಹೊರಭಾಗದ ಶ್ರೀಕಾರವು ಯಾವಭಾಗಕ್ಕೆ ತಿರುದುಕೊಂಡಿರುತ್ತದೆ, ಅದರಂತೆ ಅವುಗಳನ್ನು ಕರೆಯುವುದು ಸಂಪ್ರದಾಯ. ಯಾರ ಮನೆಯಲ್ಲಿ ಬಲಮುರಿಯ ಶಂಖವಿರುತ್ತದೆಯೋ ಆ ಗೃಹವು ಮಹಾ ಮಂಗಲಪ್ರದವಾದುದು. ಶಂಖಗಳಿಗೆ ಬಂಗಾರದ ಕವಚ ಹಾಕಿಸಿ ಗಂಧಮಾಲ್ಯಾದಿ ಸುಗಂಧ ದ್ರವ್ಯಾದಿಗಳಿಂದ ಪೂಜೆ ಮಾಡುವುದುಂಟು.

ಪ್ರತಿದಿನವೂ ವಿಧಿಪೂರ್ವಕವಾಗಿ ಶ್ರದ್ಧಾ ಭಕ್ತಿಗಳಿಂದ ಶಂಖವನ್ನು ಪೂಜಿಸುವುದರಿಂದ ಶ್ರೀದೇವಿಯ ಅನುಗ್ರಹವು ಲಭಿಸುವದೆಂದು ತಂತ್ರಸಾರದಲ್ಲಿ ಹೇಳಲಾಗಿದೆ, ಹೀಗೆ ಮಾಡಿದಲ್ಲಿ ಸಂತಾನಾಭಿವೃದ್ಧಿಯಾಗುವದೆಂದು ಹೇಳಿದ್ದಾರೆ. ಈ ಶಂಖ ಪೂಜಾವಿಧಾನದ ಪದ್ಧತಿಯೂ ಇದೆ. ಅದಕ್ಕೆ ಬೀಜಾಕ್ಷರಗಳೂ ಇವೆ.

ಓಂ, ಹ್ರೀಂ, ಶ್ರೀಂ, ಕ್ಲೀಂ, ಬ್ಲೂಂ
ಸುದಕ್ಷಿಣಾವರ್ತ ಶಂಖಾಯ ನಮಃ

ಮೂರು ಭಾಗ ಚಿನ್ನ ಒಂದು ಭಾಗ ಬೆಳ್ಳಿ ಮಿಶ್ರಿತವಾದ ತಗಡು ರಚಿಸಿ, ಆ ತಗಡಿನ ಮೇಲೆ ಅಂಡಾಕಾರದಲ್ಲಿ ಈ ಬೀಜ ಮಂತ್ರಾಕ್ಷರಗಳನ್ನು ಬರೆಯಬೇಕು. ನಂತರ ಆ ಮಂತ್ರದ ಮೇಲೆ ಬಲಮುರಿಯ ಶಂಖವನ್ನಿರಿಸಿ, ಷೋಡಶೋಪಚಾರಗಳಿಂದ ಪೂಜೆಮಾಡಿದಲ್ಲಿ ಶ್ರೀದೇವಿಯ ಅನುಗ್ರಹವಾಗುವದರಲ್ಲಿ ಸಂದೇಹವಿಲ್ಲ.

ನಿಸರ್ಗವು ಈ ಶಂಖದಲ್ಲಿಯೂ ಕೂಡ ತನ್ನತನದ ಪ್ರಭಾವವನ್ನಿಟ್ಟಿದೆ. ಇವುಗಳಲ್ಲಿಯೂ ಸಹ ಹೆಣ್ಣು ಗಂಡು ಎಂಬ ಪ್ರಭೇದಗಳಿವೆ. ಶಂಖ ಇದು ಗಂಡು, ಶಂಖಿಣಿ ಎಂಬುದು ಹೆಣ್ಣು. ಒಳ್ಳೆ ಶಂಖವು ಶುಭ್ರವಾಗಿರುತ್ತದೆ, ಬಕುಲ ಹೂವಿನ ಬಣ್ಣದ್ದಾಗಿರುತ್ತದೆ. ಶಂಖಿಣಿಯ ಬಣ್ಣವು ನಸುಗಪ್ಪು. ಅದರ ಮೈಮೇಲೆ ಅಲ್ಲಲ್ಲಿ ಚುಕ್ಕೆಗಳಿರುತ್ತವೆ. ಬಲಮುರಿ ಶಂಖದೊಂದಿಗೆ ಶಂಖಿಣಿಯನ್ನಿಟ್ಟು ಪೂಜೆ ಮಾಡಿದಲ್ಲಿ ಆ ಮನೆಯಲ್ಲಿ ಧನಧಾನ್ಯಾದಿಗಳ ಕೊರತೆ ಎಂದೂ ಕಾಣಲಾರದು. ಬಹುಕಾಲದಿಂದ ಪೂಜಿಸುತ್ತ ಬಂದಿದ್ದ ಶಂಖವು

ಸ್ವಲ್ಪ ಭಿನ್ನವಾದರೂ ಸಹ ಅದನ್ನು ಬಿಸಾಡದೆ ಅದಕ್ಕೆ ಬಂಗಾರದ ಹೊದಿಕೆ ಹಾಕಿಸಿ ಪೂಜೆ ಮಾಡಬಹುದು. ಹೀಗೆ ಮಾಡುವದರಿಂದ ಭಿನ್ನವಾದ ದೋಷವು ದೂರಾಗುವುದೆಂದು ಹೇಳುತ್ತಾರೆ

ಆಯುರ್ವೇದ ಚಿಕಿತ್ಸಾವಿಧಾನದಲ್ಲಿ ಶಂಖದ ಬಳಕೆ ಇದೆ. ಪ್ರಾಚೀನರು ಅದರಿಂದ ಬಹು ಮೌಲ್ಯದ ಔಷಧಗಳನ್ನು ಕಂಡುಕೊಂಡಿದ್ದಾರೆ. ಶಂಖಭಸ್ಮ ಸೇವನೆಯಿಂದ ಮೂಕರಿಗೂ ಸಹ ಮಾತುಬರುತ್ತದೆ. ಮೂಕರಿಂದ ಪ್ರತಿದಿನವೂ ತಪ್ಪದೆ ನಾಲ್ಕು ಗಂಟೆಗಳವರೆಗೆ ಶಂಖವನ್ನೂದಿಸಬೇಕು. ಅಲ್ಲದೆ ಶಂಖದಲ್ಲಿರಿಸಿದ ನೀರನ್ನು ಕುಡಿಯಲು ಕೊಡಬೇಕು. ಇದರಿಂದ ಮೂಕನು ವಾಚಾಳಿಯಾಗುತ್ತಾನೆ ಎನ್ನುವರು.

ಪ್ರಾಚೀನ ಕಾಲದಲ್ಲಿ ಬಾಲ್ಯದಿಂದಲೇ ಮಕ್ಕಳ ಕೊರಳಲ್ಲಿ ಶಂಖವನ್ನು ಕಟ್ಟುತ್ತಿದ್ದರು. ಮಗುವಿಗೆ ಬೇಗನೇ ಮಾತು ಬರಲೆಂದೇ ಹೀಗೆ ಮಾಡುತ್ತಿದ್ದರು. ಇನ್ನು ನಮ್ಮ ಗ್ರಾಮಾಂತರ ನಿವಾಸಿಗಳಾದ ಕೃಷಿಕರು ತಮ್ಮ ಎತ್ತುಗಳ ಕೊರಳಲ್ಲಿಯೂ ಶಂಖಗಳನ್ನು ಕಟ್ಟುವ ಪದ್ಧತಿ ಇರುವುದು. ಇದರಿಂದ ಅವು ಬಲಶಾಲಿಯಾಗಿ ನಿರ್ಭೀತಿಯಿಂದ ಬೆಳೆಯುವುವಲ್ಲದೆ, ಅವುಗಳಿಗೆ ಯಾವದೇ ತರಹದ ದೃಷ್ಟಿದೋಷವಾಗಲಾರದೆಂಬ ಭಾವನೆಯೇ ಇದಕ್ಕೆ ಕಾರಣವಾಗಿದೆ.

ಸಾಣೆಯಕಲ್ಲಿನ ಮೇಲೆ ಶಂಖವನ್ನು ತಿಕ್ಕಿ ಅದರ ರಸವನ್ನು ನೇತ್ರಗಳಿಗೆ ಲೇಪಿಸಿದಲ್ಲಿ ಕಣ್ಣಿನ ಕಾಂತಿಯು ವೃದ್ಧಿಯಾಗುತ್ತದೆ. ರಸವನ್ನು ಮುಖಕ್ಕೆ ಲೇಪಿಸಿಕೊಳ್ಳುವುದರಿಂದ ಮುಖವು ಕಾಂತಿಯುಕ್ತವಾಗಿ ಹೊಳೆಯುತ್ತದೆ. ಶಂಖಭಸ್ಮಸೇವನ ಮಾಡುವುದರಿಂದ ಗುಲ್ಮಶೂಲ, ಪಿತ್ತ, ಕಫ, ಪ್ಲೀಹ, ರುಧಿರಾದಿ ರೋಗಗಳ ನಿವಾರಣೆಯಾಗುತ್ತದೆ.

ಮೇಲೆ ವಿವರಿಸಲಾದ ಈ ಎಲ್ಲ ವಿಚಾರಗಳ ಬಗ್ಗೆ ಮನವರಿಕೆಯಾಗಬೇಕಿದ್ದಲ್ಲಿ ನೀವು ಆರಿಸಿಕೊಳ್ಳುವ ಶಂಖವು ಅಪ್ಪಟವಾದುದೋ ಇಲ್ಲವೆ ಕೃತ್ರಿಮವಾದುದೋ ಎಂಬುದನ್ನು ಪರೀಕ್ಷಿಸುವುದು ಅತಿಮುಖ್ಯ. ಒಳ್ಳೆಯ ಶಂಖಗಳನ್ನು ಕಿವಿಯ ಹತ್ತಿರ ಹಿಡಿದರೆ ಅದರ ನಾದ ಸಮುದ್ರದ ಅಲೆಗಳಂತಹ ಧ್ವನಿಯನ್ನು ನಾವು ಕೇಳಬ[…] ಶಂಖದ ತುದಿಭಾಗವನ್ನು ಬಲಗೈಯಲ್ಲಿ […] ನೀರು ತುಂಬಿ ಮಧ್ಯಭಾಗವನ್ನು ಎಡಗೈ[…] ಹಿಡಿದು ಅದರ ತುದಿಭಾಗವನ್ನು ಸಪ[…] ಹೊರಳಿಸಿಕೊಳ್ಳಬೇಕು. ಹಾಗೆ ಮಾಡ[…] ಅದರಲ್ಲಿ ತುಂಬಿದ ನೀರು ಚೆಲ್ಲಬಾರದು. […] ಮಾತ್ರ ಅದು ಪರಿಶುದ್ಧ ಶಂಖವೆಂದು ಗು[…] ಬಹುದು.

ಇತ್ತೀಚೆಗೆ ಎಲ್ಲ ಕ್ಷೇತ್ರಗಳಲ್ಲೂ […] ಮುರಿ ಶಂಖಗಳು ದೊರೆಯುತ್ತಿವೆ. ಇವ[…] ಬಹುತೇಕ ಕೃತ್ರಿಮವಾದವು. ಅಂಥವು[…] ತಂದು ಅವುಗಳನ್ನು ಪೂಜಿಸಿ ಫಲ ಕೊಡಲಿಲ್ಲ[…] ಕೊರಗುವ ಬದಲು ಮೊದಲೇ ಪರೀಕ್ಷಿಸಿ […] ವನ್ನಾರಿಸಿ ಪೂಜೆ ಮಾಡಿದಲ್ಲಿ ನಿಮಗೆ ಕ[…] ವಾಗುವದರಲ್ಲಿ ಸಂದೇಹವಿಲ್ಲ.

★

# ಪುರಾಣಗಳಲ್ಲಿ ಶಂಖ

ಹಿಂದೂ ಧರ್ಮದ ಪ್ರಕಾರ ಧಾರ್ಮಿಕ ಶಾಸ್ತ್ರದಲ್ಲಿ ಶಂಖವು ಅತಿ ಮಹತ್ತರವಾದ ಸ್ಥಾನವನ್ನು ಪಡೆದಿದೆ. ಶಂಖವು ಆಧ್ಯಾತ್ಮಿಕ ನಾದ ರೂಪಾರ್ಥವುಳ್ಳ 'ಓಂ' ಎಂಬುದರ ಸಂಕೇತವಾಗಿದೆಯೆಂದು ತಿಳಿಯಲ್ಪಟ್ಟಿದೆ. ಅದರ ಮೂಲಕ ಹೊರ ಹೊಮ್ಮುವ ನಾದವು "ಓಂಕಾರ" ವೆಂದು ಪರಿಗಣಿಸಲ್ಪಟ್ಟಿದೆ. ಶ್ರೀಮನ್ನಾರಾಯಣನು ನಾದಬ್ರಹ್ಮನ ಸಂಕೇತವೆಂದು ತನ್ನ ದಿವ್ಯಹಸ್ತದಲ್ಲಿ ಶಂಖವನ್ನು ಹಿಡಿದಿರುವನು, ಎಂದರೆ ಪರಮಾತ್ಮನ ದಿವ್ಯಸ್ವರೂಪವು ಸ್ವರಮಾಧ್ಯಮದಲ್ಲಿ ಇರುವುದು ಎಂದಾಗಿದೆ.

ಬ್ರಹ್ಮವೈವರ್ತ ಪುರಾಣದ ಪ್ರಕಾರ ಯಾವ ಸ್ಥಾನದಿಂದ ಶಂಖನಾದವು ಕೇಳಲ್ಪಡುವುದೋ ಆ ಸ್ಥಾನದಲ್ಲಿ ಶ್ರೀಲಕ್ಷ್ಮಿ (ಐಶ್ವರ್ಯ ಅಭಿವೃದ್ಧಿ)ಯು ನೆಲಸುತ್ತಿರುವಳೆಂದು ಬಣ್ಣಿಸಲ್ಪಟ್ಟಿದೆ. ಯಾವಾತನು ಶಂಖ ದಿಂದ ಉದಿಸಲ್ಪಟ್ಟ ಉದಕದಲ್ಲಿ ಸ್ನಾನ ಮಾಡುವನೋ ಆತನು ಇತರ ಎಲ್ಲಾ ಪವಿತ್ರಜಲದಲ್ಲಿ ಮಿಂದ ಫಲವನ್ನು ಪಡೆಯುವನು. ಶಂಖವು ಎಲ್ಲಿರುವುದೋ ಅಲ್ಲಿ ಶ್ರೀಕೃಷ್ಣ ಪರಮಾತ್ಮನು ನೆಲೆಗೊಂಡಿರುವನು. ಅಲ್ಲಿಯೇ ಲಕ್ಷ್ಮಿಯು ಅನಿಷ್ಟಕರವಾದುವುಗಳನ್ನು ಹೊಡೆದೋಡಿಸಲೆಂದು ನೆಲೆಸಿರುವಳು.

ಪದ್ಮಪುರಾಣದಲ್ಲಿ ಹೀಗೆ ಬರೆಯಲ್ಪಟ್ಟಿದೆ-ಶ್ರೀಹರಿಯನ್ನು ಕಪ್ಪುವರ್ಣದ ಹಸುವನ್ನು ಕರೆದ ಹಾಲಿನಿಂದ ಶಂಖಾಭಿಷೇಕ ಮಾಡಿಸುವನೆಂದರೆ ಆತನು ಹಲವಾರು ಯಜ್ಞಗಳನ್ನು ಆಚರಿಸಿದ ಫಲವನ್ನು ಪಡೆಯುವನು. ಯಾವಾತನು ಮಾಧವನನ್ನು "ನಮೋ ನಾರಾಯಣ"! ಎಂದು ಉಚ್ಚರಿಸುತ್ತಾ ಗಂಗಾಜಲ ದಿಂದ ಅಭಿಷಿಕ್ತಗೊಳಿಸುವನೋ ಆತನಿಗೆ ಮತ್ತೆ ಜನನ ಮರಣಗಳೆಂಬ ಜಂಜಾಟವಿರುವುದಿಲ್ಲ ಎಂದರೆ ಜೀವನ್ಮುಕ್ತನಾಗುವನು. ಕೇವಲ ಶಂಖವನ್ನು ನೋಡಿದ ಮಾತ್ರಕ್ಕೆ ಎಲ್ಲ ಅಪರಾಧಗಳೂ ನಶಿಸಿ ಹೋಗುವುವು. ಸೂರ್ಯನೆದುರು ಮಂಜು ಕರಗಿ ಹೋಗುವಂತೆ ಶಂಖದ ದರ್ಶನಮಾತ್ರದಿಂದ ಸರ್ವ ಪಾಪಗಳೂ ಪರಿಹಾರವಾದಂತೆಯೇ.

ಬ್ರಹ್ಮವೈವರ್ತ ಪುರಾಣದಲ್ಲಿ ಶಂಖದ ಮೂಲವು ಈ ರೀತಿಯಾಗಿ ವಿವರಿಸಲ್ಪಟ್ಟಿದೆ- ಪರಮೇಶ್ವರನು ಶ್ರೀಹರಿಯಿಂದ ತ್ರಿಶೂಲವನ್ನು ತೆಗೆದು ಕೊಂಡಿರುವನು. ಆ ತ್ರಿಶೂಲವು ಎಷ್ಟೊಂದು ಪ್ರಕಾಶಮಾನವಾಗಿ ಝಗಝಗಿಸುವುದೆಂದರೆ,ನಡುಹಗಲಲ್ಲಿ ಸಾವಿರಾರು ಸೂರ್ಯ ಪ್ರಭೆಗಳು ಏಕಕಾಲದಲ್ಲಿ ಹೊಳೆದರೆ ಉಂಟಾಗುವಷ್ಟು ತೀಕ್ಷ್ಣತೆಯಿರುವುದು. ಈ ಕಾಂತಿಯುಕ್ತವಾದ ಆಯುಧವು ಅಸುರರಿದ್ದೆಡೆಗೆ ನುಗ್ಗಿ ಅವರನ್ನು ಸಂಹರಿಸುವುದು. ಅಸುರರು ತಾವೇರಿದ ರಥಸಮೇತರಾಗಿ ಬೂದಿಯಾಗಿ ಹೋಗುವರು. ಕೊನೆಯಲ್ಲಿ ಅವರು ಸಾಗರಕ್ಕೆ ಅರ್ಪಿಸಲ್ಪಡುವರು ಅದೇ ಭಸ್ಮವು ಸಾಗರದಲ್ಲಿ ನಾನಾ ನಮೂನೆಯ ಶಂಖವಾಗಿ ಮಾರ್ಪಟ್ಟಿರುವುದು. ಈ ರೀತಿಯಾಗಿ ಉಂಟಾಗಿರುವ ಶಂಖಗಳೇ ಭಗವಂತನ ಸೇವೆಗಾಗಿ ಮೀಸಲಾಗಿರಿಸಲ್ಪಡುವುವುಗಳಾಗಿವೆ.

ಶಂಖಗಳಲ್ಲಿ ದಕ್ಷಿಣಾವರ್ತ ಶಂಖ ಎಂದರೆ ಬಲಕ್ಕೆ ತಿರುಗಲ್ಪಟ್ಟ ಶಂಖವು ಅತ್ಯಧಿಕ ಬೆಲೆಬಾಳುವಂತದ್ದಾಗಿರುವುದು ಎಂದು ತಿಳಿಯಲ್ಪಟ್ಟಿದೆ. ವರಾಹಪುರಾಣ ಮತ್ತು ಸ್ಕಂದ ಪುರಾಣಗಳಲ್ಲಿ ಇದರ ಮಾರುಕಟ್ಟೆಯ ಬೆಲೆಯ ವಿವರಣೆಯಿರುವುದು. ವರಾಹ ಪುರಾಣದ ಪ್ರಕಾರ-ಯಾವಾತನು ಶಂಖದಿಂದ ಪವಿತ್ರಗೊಂಡ ಜಲದಲ್ಲಿ ಮೀಯುವನೋ ಆತನು ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದಿದವಂತಾಗುವನು ಎಂದಿದೆ.

ಯಾವ ಸಂದರ್ಭದಲ್ಲಿಯೂ ಶಂಖದಿಂದುದಿಸಿದ ತೀರ್ಥವನ್ನು ಆಚಮನ ಮಾಡಬಾರದು ಎಂದು ನಿಯಮವಿದೆ. ಶಂಖೋದಕವನ್ನು ಯಾವಾಗಲೂ ಬಲಕೈಯಲ್ಲಿ ಸ್ವೀಕರಿಸಿ ಭಕ್ತಿಪೂರ್ವಕವಾಗಿ ತಲೆಯ ಮೇಲೆ ಪ್ರೋಕ್ಷಿಸಬೇಕು.

ದಕ್ಷಿಣಾವರ್ತದ ಕುರಿತು ಸ್ಕಂದ ಪುರಾಣದಲ್ಲಿ ಹೇಳುವುದಾದರೆ – "ಶ್ರೀಹರಿಯನ್ನು ದಕ್ಷಿಣಾವರ್ತದ ಶಂಖದಿಂದುದಿಸಿದ ಜಲದಿಂದ ಅಭಿಷೇಕಗೊಳಿಸಿದರೆ ತಕ್ಷಣವೇ ಏಳು ಜನ್ಮಗಳ ಪಾಪಗಳೂ ತೊಳೆದು ಹೋಗುವಂತಾಗುವುದು."

ಬಲಬದಿಗೆ ತಿರುವಲ್ಪಟ್ಟ ಶಂಖವು ರತ್ನಾಭರಣವೆಂದು ಪರಿಗಣಿಸಲ್ಪಟ್ಟಿದೆ.

ಸೌರಾಷ್ಟ್ರ ಮತ್ತು ಇತರ ಕೆಲವೆಡೆಗಳ ಸಮುದ್ರ ಕಿನಾರೆಗಳಲ್ಲಿ ಶಂಖಗಳು ದೊರೆಯುವವೆಂದು ಹೇಳಲ್ಪಟ್ಟಿರುವುದು. ಇವುಗಳಲ್ಲಿ ಅತ್ಯಧಿಕ ಉಚ್ಚತರದವುಗಳೆಂದರೆ ಅತೀ ಮೆರುಗಿನಿಂದ ಕೂಡಿರುವುದೂ, ಮೃದುವಾಗಿರುವಂತಹುದೂ, ಚಂದ್ರನಂತೆ ಬಿಳಿಯಾಗಿರುವುದೂ, ತುದಿಚೂಪಾಗಿಯೂ ಇರುವಂತಹದ್ದಾಗಿದೆ. ಇವುಗಳಲ್ಲಿ ಕೆಲವು ಶಂಖಗಳ ಪೊಳ್ಳುಭಾಗವು ಬಲಭಾಗಕ್ಕೆ ತಿರುವಿಕೊಂಡಿರುವುದು. ಇಂತವುಗಳನ್ನು ದಕ್ಷಿಣಾವರ್ತದವುಗಳೆಂದು ಕರೆಯುತ್ತಾರೆ ಕೆಲವು ಶಂಖಗಳ ರಂಧ್ರಭಾಗವು ಎಡಬದಿಗೆ ತಿರುವಿದಂತಿರುವುದು. ಇಂತಹ ಶಂಖಗಳನ್ನು ವಾಮಾವರ್ತ ಶಂಖಗಳೆಂದು ಕರೆಯುತ್ತಾರೆ ದಕ್ಷಿಣಾವರ್ತ ಮತ್ತು ವಾಮವರ್ತ ಶಂಖಗಳಲ್ಲಿ ದಕ್ಷಿಣಾವರ್ತ ಶಂಖವು ಅತ್ಯಮೂಲ್ಯವಾದುದೆಂದು ಪರಿಗಣಿಸಲ್ಪಟ್ಟಿದೆ-ಏಕೆಂದರೆ ಬಲಬದಿಗೆ ತಿರುವಲ್ಪಟ್ಟ ರಂಧ್ರವಿರುವ ದಕ್ಷಿಣಾವರ್ತ ಶಂಖವನ್ನು ಹೊಂದಿದವನು ಆಯುರಾರೋಗ್ಯವುಳ್ಳವನೂ, ಕೀರ್ತಿಶಾಲಿಯೂ ಐಶ್ವರ್ಯವಂತನಾಗಿಯೂ ರಾರಾಜಿಸುವನೆಂದು ಪ್ರತೀತಿಯದೆ.

ವಾಮಾವರ್ತ ಶಂಖಗಳಲ್ಲಿ ದಕ್ಷಿಣಾವರ್ತಗಳಲ್ಲಿಲ್ಲದ ಕೆಲವು ನ್ಯೂನತೆಗಳಿರುವುದು ಎಂದರೆ ತೂಕವುಳ್ಳದ್ದಾಗಿ ಕಾಂತಿ ರಹಿತವಾಗಿಯೂ ಇರುವುದಲ್ಲದೆ ಅದರಂತೆ ಮಡಿಯಾಗಿ ಇರುವುದಿಲ್ಲ. ಇಷ್ಟೊಂದು ಕುಂದು

**ಶ್ರೀಮತಿ ಜಯಶ್ರೀ ಅರ್ತಿಕಜೆ**

ಕೊರತೆಗಳಿಂದ ಕೂಡಿದರೂ ಇತಕ್ಕೆ ನಿವಾರಣೋಪಾಯವಿದೆ. ಯಾವ ರೀತಿಯದೆಂದರೆ, ಅಂತಹ ಶಂಖವನ್ನು ಚಿನ್ನದಿಂದ ಕಟ್ಟಿಸಲ್ಪಟ್ಟರೆ ಅವರ ದೋಷ ಪರಿಹಾರವಾದಂತೆಯೇ ಎಂಬುದು ನಂಬಿಕೆ.

ಬಹು ಪುರಾತನ ಕಾಲದಲ್ಲಿಯೇ ಶಂಖವನ್ನು ಯುದ್ಧವಾದ್ಯವಾಗಿ ಭಾರತದ ಪೂರ್ವಜರು ಬಳಸುತ್ತಿದ್ದರು. ಪ್ರತಿಯೊಬ್ಬ ಯುದ್ಧವೀರನಿಗೂ ಮಹತ್ತ್ವಪೂರ್ಣವಾದ ತನ್ನದೇ ಆದ ಒಂದೊಂದು ಶಂಖವಿದ್ದಿತು. ಉದಾಹರಣೆಗಾಗಿ ಶ್ರೀಕೃಷ್ಣ ಪರಮಾತ್ಮನು ಬಳಸುತ್ತಿದ್ದ ಶಂಖವನ್ನು "ಪಾಂಚಜನ್ಯ" ವೆಂಬ ಹೆಸರಿನಿಂದ ಕರೆಯುತ್ತಿದ್ದರು. ಅರ್ಜುನನು ತನ್ನ ಶಂಖವನ್ನು "ದೇವದತ್ತ" ವೆಂದು ಕರೆಯುತ್ತಿದ್ದನು. ಭೀಮನು "ಖಡ್ಗ" ವೆಂದು ಕರೆಯಲ್ಪಡುವ ಶಂಖವನ್ನು ಹಿಡಿದುಕೊಳ್ಳುತ್ತಿದ್ದನು. ಪಾಂಡವರಲ್ಲಿ ಹಿರಿಯಣ್ಣನಾಗಿರುವವನೂ ಧರ್ಮರಾಯನೆಂದು ಪರಿಗಣಿಸಲ್ಪಡುತ್ತಿದ್ದ ಯುಧಿಷ್ಠಿರನು "ಅನಂತವಿಜಯ" ವೆಂದು ಕರೆಯಲ್ಪಡುವ ಸಾಮಾಗ್ರಿಯನ್ನು ಬಳಸುತ್ತಿದ್ದನು. ನಕುಲನು "ಸುಘೋಷ" ವನ್ನೂ ಸಹದೇವನು "ಮಣಿ ಪುಷ್ಪಕ" ವನ್ನೂ ತಮ್ಮ ಆಯುಧವೆಂದು ಕರೆಯುತಲಿದ್ದರು.

ಕುಬೇರನೆಂಬ ದೇವನು ರಹಸ್ಯಾರ್ಥಕವುಳ್ಳ ಐಶ್ವರ್ಯವನ್ನು ಹೊಂದಿದವನೆಂದೂ ಅದುವೇ ಶಂಖವೆಂದು ಕರೆಯಲ್ಪಡುವ 'ನಿಧಿ'ಯೆಂಗು ಪುರಾಣದಲ್ಲಿ ಉಲ್ಲೇಖಿತವಾಗಿದೆ. ಈ ಕಾರಣದಿಂದಲೇ ಕುಬೇರನು ಅಷ್ಟೈಶ್ವರ್ಯ ಸಂಪನ್ನನಾಗಿರುವನೆಂದು ಸಾರಲ್ಪಟ್ಟಿದೆ.

ಸಾಮುದ್ರಿಕ ಶಾಸ್ತ್ರದಲ್ಲಿ ಹಸ್ತ
ಮಾನವ ಶಂಖರೂಪದ ಗೆರೆಗಳ
ಆತನು ರಾಜನಂತೆ ಮೆರೆಯುವನೆಂದ
ಆತನ ಘನತೆಯು ಅತ್ಯುನ್ನತ ಶಿಖ
ಕ್ಕೇರುವುದೆಂದೂ ಉಲ್ಲೇಖಿಸಲ್ಪಟ್ಟ
ಭವಿಷ್ಯಕಾರರು ಕೂಡಾ ಶಂಖವನ್ನು ಅ
ಮೂಲ್ಯವಾದ ಸಾಧನವೆಂದು ಪರಿಗಣಿ
ತ್ತಾರೆ.

ವೈದ್ಯಶಾಸ್ತ್ರದಲ್ಲಿಯೂ ಶಂಖಕ್ಕೆ ಅ
ಗಣ್ಯಸ್ಥಾನವಿದೆ ಅದರ ಪ್ರಕಾರ ಶಂ
ವಾತ-ಪಿತ್ತನೋದಲಾದ ಮಾನವವ್ಯಾ
ಳನ್ನು ಗುಣಪಡಿಸಲು ಸಹಾಯಕವಾಗಿ
ಎಂದೂ ಅಲ್ಲದೆ ಮಾನವನಿಗೆ ಸೌಂದರ್ಯವನ
ಶಕ್ತಿಸಾಮರ್ಥ್ಯವನ್ನೂ ಶಂಖವು ಒದಗಿ
ವುದರೊಂದಿಗೆ ಸಂಪನ್ನನನಾಗಿಸುವುದೆಂ
ಪ್ರಚಲಿತವಿದೆ.



# ತಿ.ತಿ.ದೇ. ಬೋರ್ಡ್ ತೀರ್ಮಾನಗಳು

ತಿ. ತಿ. ದೇ.ಗಳಿಗಾಗಿ ಹತ್ತು ತೆಲುಗು ಫೇಸಿಟ್ ಟೈಪ್‌ರೇಟರ್‌ಗಳನ್ನು ಉತ್ಪಾದಕರಿಂದ ನೇರವಾಗಿ ಟೆಂಡರ್‌ಗಳಿಲ್ಲದೆ ಕೊಳ್ಳಲು ತೀರ್ಮಾನಿಸಲಾಯಿತು.

* * *

ಎಸ್. ವಿ. ಮೂಗ ಬಧಿರ ಪಾಠಶಾಲೆಯಲ್ಲಿ ಇಡುಗಂಟು ಸಂಬಳದ ಮೇಲೆ ಕೆಲಸ ಮಾಡುತ್ತಿರುವ ಪ್ರಾಂಶುಪಾಲ ಶ್ರೀ ತಲ್ಪಶಾಯಿಯವರ ಸಂಬಳವನ್ನು 9/85 ರಿಂದ 25% ಹೆಚ್ಚಿಸಲು ತೀರ್ಮಾನಿಸಲಾಯಿತು.

* * *

ಎಸ್. ವಿ. ಆಯುರ್ವೇದ ಕಾಲೇಜಿನಲ್ಲಿ ತಿ. ತಿ. ದೇ. ಉದ್ಯೋಗಿಗಳ ಮಕ್ಕಳಿಗಾಗಿ ಒಂದು ಅವಕಾಶವನ್ನು ಮೀಸಲಿರಿಸಬೇಕೆಂದು ವಿಶ್ವ-ವಿದ್ಯಾಲಯಕ್ಕೆ ಶಿಫಾರಸುಮಾಡಲು ತೀರ್ಮಾನಿಸಲಾಯಿತು.

* * * *

ಧರ್ಮಪ್ರಚಾರ ಪರಿಷತ್ ಎಂಬ ಹಿಂದೂ ಧರ್ಮ ಪ್ರಸಾರ ಸಂಸ್ಥೆಯನ್ನು ಏರ್ಪಡಿಸಿ ಅದರ ಆಡಳಿತ ಮಂಡಳಿಗೆ ಶ್ರೀ ಐ. ಎಲ್. ಎನ್. ಶಾಸ್ತ್ರಿ, ಶ್ರೀ ಸತ್ಯನಾರಾಯಣರಾವ್, ಶ್ರೀಮತಿ ವರದಾಸರೋಜ ಇವರುಗಳನ್ನು ನಾಮಕರಣ ಮಾಡಲಾಯಿತು.

* * * *

ತಿ. ತಿ. ದೇವಸ್ಥಾನಗಳಲ್ಲಿ ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ ಆಗಿ ಕೆಲಸ ಮಾಡುತ್ತಿರುವ ಶ್ರೀ ಆರ್. ವಾಸುದೇವನಾಯುಡು ಅವರಿಗೆ ವಿಶೇಷ ದರ್ಜೆಯ ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ ಆಗಿ ಭಡತಿ ನೀಡಲು ಸರ್ಕಾರಕ್ಕೆ ಶಿಫಾರಸುಮಾಡಲು ತೀರ್ಮಾನಿಸಲಾಯಿತು.

* * * *

ನಿರ್ಮಾಣದ ವಿವಿಧ ಹಂತಗಳಲ್ಲಿರುವ, ಹಾಗೂ ಪೂರ್ಣಗೊಳ್ಳಲಿರುವ ತಿ. ತಿ. ದೇ. ಕಲ್ಯಾಣ ಮಂಟಪ,ವಿಚಾರಣಾಕೇಂದ್ರಗಳು,ಸಾರ್ವಜನಿಕರ ಬಳಕೆಗೆ ಬಿಡುಗಡೆಯಾದಾಗ ಅವುಗಳನ್ನು ನಿರ್ವಹಿಸಲು ಬೇಕಾದ ಸಿಬ್ಬಂದಿ ವರ್ಗವನ್ನು ಮೊದಲ ಹಂತದಲ್ಲಿ, ಅವುಗಳು ಆರಂಭವಾದ ದಿನದಿಂದ ಮೂರುವರ್ಷಗಳವರೆಗೆ ನೇಮಕಮಾಡಲು, ಹೊಸ ಉದ್ಯೋಗ ನೀಡಿಕೆಯ ನಿಷೇಧವನ್ನು ಸಡಲಿಸಬೇಕೆಂದು ಸರ್ಕಾರಕ್ಕೆ ಕೇಳಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ವಿದ್ಯುತ್ ಇಲಾಖೆಯ ತಾತ್ಕಾಲಿಕ ಉದ್ಯೋಗಿಗಳನ್ನು 10-6-87 ರಿಂದ ಒಂದು ವರ್ಷಕಾಲ ಮುಂದುವರಿಸಿ, ಅದಕ್ಕಾಗಿ ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * *

ಕಪಿಲತೀರ್ಥದಲ್ಲಿರುವ ಶ್ರೀ ವೇಣುಗೋಪಾಲ ಸ್ವಾಮಿ ದೇವಾಲಯದಲ್ಲಿ ನಿತ್ಯ ಪೂಜೆ, ಧೂಪ ದೀಪ ನೈವೇದ್ಯಗಳಿಗೆ ದಿತ್ತವನ್ನು ನಿಗಧಿಗೊಳಿಸಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಎಸ್. ವಿ. ಆರ್. ಆರ್. ಆಸ್ಪತ್ರೆಯ ಹೃದ್ರೋಗ ಚಿಕಿತ್ಸಾವಿಭಾಗಕ್ಕೆ ಇಮೇಜ್ ಇಂಟೆನ್ಸಿಫೈಯರ್ ಯಂತ್ರವನ್ನು ಕೊಳ್ಳಲು 8 ಲಕ್ಷರೂ ದೇಣಿಗೆ ನೀಡುವ ಬಗ್ಗೆ ಸರ್ಕಾರಕ್ಕೆ ಶಿಫಾರಸುಮಾಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇವಸ್ಥಾನಗಳ ಆಸ್ಪತ್ರೆಯಲ್ಲಿ ತಿ. ತಿ. ದೇ. ಗಳಲ್ಲಿ ಎನ್. ಎಂ. ಆರ್. ಹಾಗೂ ಇಡುಗಂಟುಸಂಬಳದ ಕೆಲಸಗಾರರು ಹಾಗೂ ಅವರುಗಳ ಆಶ್ರಿತರಿಗೂ ಚಿಕಿತ್ಸಾ ವಕಾಶ ವಿಸ್ತರಿಸಲು ತೀರ್ಮಾನಿಸಲಾಯಿತು.

* * * *

ತಿರುಪತಿಗೆ ನೀರು ಸರಬರಾಜು ಮಾಡುವ ಕಲ್ಯಾಣಿ ಜಲಾಶಯದ ದೈನಂದಿನ ದೇಖಾವೆ ಹಾಗೂ ದುರಸ್ತಿ ಖರ್ಚುಗಳಿಗಾಗಿ ಒಂದು ಲಕ್ಷ ರೂಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಯಿತು.

* * * *

ಕಲ್ಯಾಣಿ ಜಲಾಶಯದಿಂದ ದಿನಂಪ್ರತಿ ಐದು ಲಕ್ಷ ಗ್ಯಾಲನ್ ನೀರನ್ನು ತಿ ತಿ.ದೇ. ಗಳು ಬಳಸಿಕೊಳ್ಳಲು ಅನುಕೂಲವಾಗುವಂತೆ ಬೇರೆಯಾದ ಕೊಳವೆಸಾಲನ್ನು ಹಾಕಿಸಲು 18 ಲಕ್ಷ ರೂ. ಗಳನ್ನು ಆಡಳಿತಾತ್ಮಕವಾಗಿ ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಇಂಜನಿಯರಿಂಗ್ ವಿಭಾಗದಲ್ಲಿ ಚೀಫ್ ಇಂಜನೀಯರ ಆಪ್ತಸಹಾಯಕ ಸ್ಥಾನಕ್ಕೆ (ಎಕ್ಸಿಕ್ಯೂಟಿವ್ ಇಂಜನಿಯರ್ ದರ್ಜೆಯಲ್ಲಿ) ಶ್ರೀ ಸೀತಾರಾಮರಾವ್ ಅವರಿಗೆ ಭಡತಿ ನೀಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀ ಪದ್ಮಾವತೀ ಹಿರಿಯ ಪ್ರಾಥಮಿಕ ಶಾಲೆಯನ್ನು (ಆಂಗ್ಲ ಮಾಧ್ಯಮ) ಪ್ರೌಢಶಾಲೆಯನ್ನಾಗಿ ಪರಿವರ್ತಿಸಿದ ನಂತರ ಅದರ ಹೆಸರನ್ನು ಶ್ರೀ ಕೋದಂಡರಾಮಸ್ವಾಮಿ ಪ್ರೌಢಶಾಲೆ ಎಂದು ಬದಲಾಯಿಸಲು ತೀರ್ಮಾನಿಸಲಾಯಿತು.

* * * *

10-6-1987 ರಂದು ಶ್ರೀ ಗೋವಿಂದರಾಜ ಸ್ವಾಮಿ ರಥೋತ್ಸವದ ಹೊತ್ತಿನಲ್ಲಿ ಅಪಘಾತ-ಕ್ಕೀಡಾಗಿ ಮೃತರಾದ ಸಹಾಯಕ ಶ್ರೀ ಪಿ. ವೆಂಕಟೇಶ್ವರ್ಲು ಅವರ ಕುಟುಂಬಕ್ಕೆ 5000 ರೂ. ಗಳ ಪರಿಹಾರವನ್ನು ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳಿಗೆ ಬೇಕಾದ ಗೋಡಂಬಿ ಹಾಗೂ ಏಲಕ್ಕಿಗಳನ್ನು ಸರ್ಕಾರಿ ಉದ್ಯಮಗಳಾದ ಕೇರಳ ಗೋಡಂಬಿ ಅಭಿವೃದ್ಧಿ ನಿಗಮದಿಂದಲೂ, ಭಾರತ ಏಲಕ್ಕಿ ವ್ಯಾಪಾರ ಸಂಸ್ಥೆಯಿಂದಲೂ ಕೊಳ್ಳಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳಲ್ಲಿ ಸ್ಥಪತಿಯಾಗಿ ಕೆಲಸ ಮಾಡುತ್ತಿದ್ದ ಶ್ರೀ ಎಸ್. ಕೆ. ಆಚಾರಿ ಅವರನ್ನು 3500 ರೂಗಳ ಮಾಹೆಯಾನ ಇಡುಗಂಟು ಸಂಬಳದಲ್ಲಿ ಮುಂದುವರಿಸಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಮುದ್ರಣಾಲಯದಲ್ಲಿ ಆಯುರ್ವೇದ ಗ್ರಂಥಗಳನ್ನು ಮುದ್ರಿಸಲು ತೀರ್ಮಾನಿಸಲಾಯಿತು.

## ತಿ. ತಿ. ದೇ. ಆಡಳಿತಕ್ಕೆ ಹೊಸ ಸಮಿತಿಗಳು

ತಿ. ತಿ. ದೇವಸ್ಥಾನಗಳ ಆಡಳಿತವನ್ನು ಸುಗಮಗೊಳಿಸುವುದಕ್ಕಾಗಿ ತಿ. ತಿ. ದೇ. ಬೋರ್ಡ್ ಹೊಸದಾಗಿ ನಾಲ್ಕು ಉಪಸಮಿತಿಗಳನ್ನು ನಿಯಮಿಸಿದೆ. ಅದರಂತೆ ಈ ಉಪಸಮಿತಿಗಳಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷರು, ಆಂಧ್ರ ಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಹಾಗೂ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳೊಂದಿಗೆ ಮತ್ತಿಬ್ಬರು ಬೋರ್ಡ್ ಸದಸ್ಯರೂ ಇರುವರು. ಆ ವಿವರಗಳು ಹೀಗಿವೆ.

1) ಆಡಳಿತ ಸಮಿತಿ :

1. ಅಧ್ಯಕ್ಷರು
2. ಶ್ರೀ ಸಿ. ಆನಂದರಾವ್
3. ಶ್ರೀ ಎಸ್. ಸತ್ಯನಾರಾಯಣ
4. ಮುಜರಾಯಿ ಇಲಾಖಾ ಕಮೀಷನರ್
5. ಕಾರ್ಯನಿರ್ವಹಣಾಧಿಕಾರಿ

2) ಆರ್ಥಿಕ ಸಮಿತಿ :

1. ಅಧ್ಯಕ್ಷರು
2. ಶ್ರೀ ಸಿ. ಆನಂದರಾವ್
3. ಶ್ರೀ ಬಿ. ರಾಮಚಂದ್ರರಾಜು
4. ಮುಜರಾಯಿ ಇಲಾಖಾ ಕಮೀಷನರ್
5. ಕಾರ್ಯನಿರ್ವಹಣಾಧಿಕಾರಿ

3) ಶಿಕ್ಷಣ ಸಮಿತಿ :

1. ಅಧ್ಯಕ್ಷರು
2. ಶ್ರೀ ಐ. ಎಲ್. ಎನ್. ಶಾಸ್ತ್ರಿ
3. ಡಾ॥ ಎನ್. ದೇವನಾಥನ್




4. ಶ್ರೀಮತಿ ವರದಾಸರೋಜ
5. ಕಾರ್ಯನಿರ್ವಹಣಾಧಿಕಾರಿ

4) ಕಾರ್ಯ ಹಾಗೂ ಕೊಳ್ಳುವಿಕೆಗಳ ಸಮಿತಿ:

1. ಅಧ್ಯಕ್ಷರು
2. ಮುಜರಾಯಿ ಇಲಾಖಾ ಕಮೀಷನರ್
3. ಶ್ರೀ ಜಿ. ನಾಗಿರೆಡ್ಡಿ
4. ಶ್ರೀ ಎಲ್. ವಿ. ರಾಮಯ್ಯ
5. ಶ್ರೀ ಯು. ಕೃಷ್ಣರಾವ್
6. ಕಾರ್ಯನಿರ್ವಹಣಾಧಿಕಾರಿ

ಈ ನಾಲ್ಕೂ ಸಮಿತಿಗಳಲ್ಲೂ ಕಾರ್ಯನಿರ್ವಹಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿ ಆಗಿರುತ್ತಾರೆ.



## ತಿರುಮಲೆಯಲ್ಲಿ ಕಂಚಿ ಪೀಠಾಧಿಪತಿ

ಕಂಚಿಯ ಕಾಮಕೋಟಿ ಪೀಠಾಧಿಪತಿ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ಜುಲೈ 2 ರಂದು ಸಂಜೆ ತಿರುಮಲೆಯನ್ನು ಸೇರಿ ಸ್ವಾಮಿಯನ್ನು ಆರಾಧಿಸಿದರು.

ತಿರುಮಲೆಯ ಗರುಡಾದ್ರಿ ನಗರದಿಂದ ತಿ. ತಿ. ದೇ. ಕಲ್ಯಾಣಕಟ್ಟೆಯ ಬಳಿಯ ಗಂಧದ ಮರದ ವರೆಗೆ ನಡೆದು ಬಂದ ಶ್ರೀ ಶ್ರೀಯವರಿಗೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರ ಸಮಕ್ಷಮದಲ್ಲಿ ಆಲಯ ಅರ್ಚಕರು ಸಾಂಪ್ರದಾಯಿಕ ಸ್ವಾಗತವನ್ನು ಬಯಸಿದರು. ಶ್ರೀ ಪಾದಂಗಳು ಮೊದಲು ಬೇಡಿ ಆಂಜನೇಯ ಸ್ವಾಮಿಯನ್ನು ಸಂದರ್ಶಿಸಿದ ನಂತರ ದೇವಾಲಯಕ್ಕೆ ಬಂದು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಆ ರಾ ಧಿ ಸಿ ದ ರು. ನಂತರ ಅವರಿಗೆ ಮೇಲ್ಚಾತ್ ರೇಷ್ಮೆವಸ್ತ್ರ, ಪಂಚೆ, ಕೌಪೀನ, ಚಿಕ್ಕ ಕೊಡೆಗಳನ್ನು ಬಹೂಕರಿಸಲಾಯಿತು.

ಶುಕ್ರವಾರ ಸ್ವಾಮಿ ಅಭಿಷೇಕದಲ್ಲೂ ಭಾಗವಹಿಸಿದ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ತಿರುಮಲೆಯಲ್ಲಿ ವೇದಶಾಸ್ತ್ರಾಗಮ ಪರಿಷತ್‌ನ ಶಿಕ್ಷಣ ಶಿಬಿರ ಪರೀಕ್ಷೆಗಳನ್ನು ಎರಡು ದಿನಗಳಕಾಲ ನಡೆಸಿ ಸುಮಾರು ನಲವತ್ತು ಮಂದಿಗೆ ಅರ್ಹತಾ ಪ್ರಮಾಣ ಪತ್ರಗಳನ್ನು ನೀಡಿದರು.

ಹೈಂದವ ಧರ್ಮದ ಸನಾತನ ಮೌಲ್ಯಗಳನ್ನು ಪ್ರಸಾರಮಾಡಿ ಭಗವದ್ಭಕ್ತಿಯನ್ನು ಹರಡುವುದರಿಂದ ಇಂದಿನ ಬಹುತೇಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದೆಂದು ನುಡಿದ ಅವರು ಸನಾತನ ಧಾರ್ಮಿಕ ಸಂಘಸಂಸ್ಥೆಗಳ ಆಡಳಿತದಲ್ಲಿ ಆಸಕ್ತರು, ಅನುಭವಸ್ಥರೂ ಇರಬೇಕೆಂದು ತಿಳಿಸಿದರು.

ಜುಲೈ 2 ರಂದು ತಿರುಪತಿಗೆ ಆಗಮಿಸಿದ ಶ್ರೀ ಪಾದಂಗಳಿಗೆ ಊರ ಮೊದಲಲ್ಲಿ ತಿರುಪತಿ ಪುರಸಭೆಯವರೂ, ಸ್ವಾಗತ ಸಮಿತಿಯವರೂ ಘನವಾದ ಸ್ವಾಗತವನ್ನು ಕೋರಿದರು. ಸ್ವಾಮಿಗಳು ಅಲ್ಲಿಂದ ಕಾಲುನಡಿಗೆಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ದೇವಾಲಯವನ್ನು ತಲುಪಿ, ಸ್ವಾಮಿಯನ್ನು ಆರಾಧಿಸಿದರು. ಅಲ್ಲಿ ಅವರಿಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಹಾಗೂ ಮತ್ತಿತರ ಅಧಿಕಾರಿಗಳು ಆಲಯೋಚಿತ ಸ್ವಾಗತವನ್ನು ಬಯಸಿದರು. (ರಕ್ಷಾಪತ್ರದ ಒಳಗಡೆ ಚಿತ್ರಗಳನ್ನು ಗಮನಿಸಿ.)

## ಹುಲ್ಲು ಬೆಳೆಯನ್ನು ತ್ವರಿತಗೊಳಿಸುವ ಯಂತ್ರ

ಹಾಲೆಂಡಿನ ಪ್ರೋವೇಟ್ ಸಂಸ್ಥೆಯವರು ಪಶುಗ್ರಾಸದ ಬೆಳೆಯನ್ನು ಶೀಘ್ರಗೊಳಿಸುವ ಯಂತ್ರವನ್ನು ಭಾರತದಲ್ಲಿ ಇದೀಗ ಪ್ರವೇಶಗೊಳಿಸಿದ್ದು ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ಡೈರಿಫಾರಂನಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿದ್ದಾರೆ.

ಅಮೆರಿಕಾ ದೇಶದ ವಿಜ್ಞಾನಿ ಜಾನ್ ರಿಚರ್ಡ್ ಬ್ರಾಡಿಯವರು ಮೂರುವರ್ಷದ ಹಿಂದೆ ಕಂಡು ಹಿಡಿದ ಈ ಯಂತ್ರ ಒಂದು ಸಾಮಾನ್ಯ ಲಾರಿಯಷ್ಟು ದೊಡ್ಡದಾದ ಪೆಟ್ಟಿಗೆಯಂತಿದ್ದು ಎಲ್ಲೆಂದರಲ್ಲಿ ಸಾಗಿಸಲೂಬಹುದು. ಒಳಭಾಗವನ್ನು ಕ್ರಿಮಿಶುದ್ಧಗೊಳಿಸಿದ್ದು 672 ತಟ್ಟೆಗಳಿದ್ದು ದಿನವೊಂದಕ್ಕೆ 84 ತಟ್ಟೆಗಳಲ್ಲಿ 150 ಕೆ.ಜಿ.ಬೀಜವನ್ನು (ಬೆಲೆ 85–00 ರೂ ) ಹರಡಿ ಬೆಳೆಯಲು ಬಿಡಲಾಗುತ್ತದೆ. ಮೊದಲ ಬೆಳೆ 8ನೇ ದಿನ ಬರುವುದು. ನಂತರ ದಿನವೂ ಸಿದ್ಧವಾಗುವುದು. ತಟ್ಟೆಯೊಂದಕ್ಕೆ 12.5 ಕಿಲೋ ಹುಲ್ಲಿನಂತೆ ಒಂದು ಟನ್ ಹುಲ್ಲಿನ ಬೆಳೆಯನ್ನು ಪಡೆಯಬಹುದಾದ ಈ ಯಂತ್ರದಲ್ಲಿ ವಾತಾವರಣ, ಉಷ್ಣತೆ ನಿಯಂತ್ರಣ, ವಿದ್ಯುದ್ ವಿಶ್ಲೇಷಣೆಗಳಿಗೆಲ್ಲ ಅವಕಾಶವಿದ್ದು ಎಲ್ಲವೂ ಸ್ವಯಂಚಾಲಿತವಾಗಿವೆ.

ಈ ಯಂತ್ರದಲ್ಲಿ ಮಣ್ಣಿನ ಅಗತ್ಯವಿಲ್ಲ. ಹುಲ್ಲಿನ ಬೀಜಗಳನ್ನು ತಟ್ಟೆಯಲ್ಲಿ ಹರಡಿ; ಅವುಗಳ ಸ್ಥಾನ ದಲ್ಲಿಟ್ಟ ನಂತರ ವಿವಿಧ ಪೋಷಕಾಂಶ, ರಾಸಾಯನಿಕಗಳನ್ನು ಬೆರೆಸಿದ ನೀರನ್ನು ಆಗಾಗ ಎರಡು ನಿಮಿಷ ಕಾಲ ಸ್ವಯಂಚಾಲಿತ ಯಂತ್ರದಿಂದ ಚುಮುಕಿಸಲಾಗುವುದು.

ಎಂಟು ದಿನಗಳ ನಂತರ ದಿನವೊಂದಕ್ಕೆ ಒಂದು ಸಾವಿರ ಕಿಲೋ ಹುಲ್ಲನ್ನು ನೀಡುವ ಈ ಯಂತ್ರದಿಂದಾಗಿ, ದಿನಕ್ಕೆ ಐವತ್ತು ಹಾಲು ನೀಡುವ ಹಸುಗಳಿಗೆ, ಎತ್ತು, ಕುದುರೆ, ಮೇಕೆ, ಕುರಿಗಳಿಗೆ ಆಹಾರವನ್ನು ನೀಡಬಹುದು.

ಯಂತ್ರದೊಡನೆ ಪ್ರಾತ್ಯಕ್ಷಿಕೆಯಲ್ಲಿ ಭಾಗ ವಹಿಸುತ್ತಿರುವ ಡಾ॥ ಜಾನ್ ಕಾರ್ಲೊಸ್ ಮಶ್ಶೈರೋ ಪ್ರೆಸೆನ್ಸಿಯೋ ಅವರು (ಪೋಷಕಾಂಶ ವಿಜ್ಞಾನಿ) ಈ ಯಂತ್ರದ ಹುಲ್ಲಿನಿಂದಾಗಿ ಪಶುಗಳಿಗೆ ಕ್ರಿಮಿರಹಿತ ಆಹಾರ ದೊರೆಯುವುದೆಂದೂ, ಈ ಗ್ರಾಸವನ್ನು ಬೇರಿನೊಂದಿಗೆ (ಹುಲ್ಲಿಗಿಂತ ಹೆಚ್ಚು ಪೋಷಕಾಂಶಗಳಿಂದ ಕೂಡಿರುವುದು) ಪಶುಗಳು ತಿನ್ನಲು ಅವಕಾಶವಿದೆಯೆಂದೂ, ಇದರಿಂದಾಗಿ ಹಸುಗಳ ತೂಕ ಹೆಚ್ಚಿ, ಹಾಲಿನ ಉತ್ಪಾದನೆಯೂ ಕ್ರಮೇಣ ಹೆಚ್ಚುವುದೆಂದೂ ತಿಳಿಸಿದರು.

ಈ ಯಂತ್ರದ ಪ್ರಾತ್ಯಕ್ಷಿಕೆಯನ್ನು ಜೂನ್ ತಿಂಗಳ ಕೊನೆಯ ವಾರದಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಅವರು ಶ್ರೀ ವೆಂಕಟೇಶ್ವರ ಡೈರಿಫಾರಂ ಆವರಣದಲ್ಲಿ ಉದ್ಘಾಟಿಸಿದರು. ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿ ರಾಜು ಅವರು, ಪ್ರೋವೇಟ್ ಸಂಸ್ಥೆಯ ಮ್ಯಾನೇ-ಜಿಂಗ್ ಡೈರೆಕ್ಟರ್ ಶ್ರೀ ಜೆ. ಆರ್. ತನೇಜಾ ಅವರುಗಳೂ ಉಪಸ್ಥಿತರಿದ್ದರು

(ರಕ್ಷಾಪತ್ರದ ಒಳಪುಟದಲ್ಲಿ ಪ್ರೋವೇಟ್ ಯಂತ್ರದ ಮುಂದೆ ನಿಂತಿರುವ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು, ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ, ಪೋಷಕಾಂಶ ವಿಜ್ಞಾನಿ ಡಾ॥ ಮ.ಶ್ಶೈರೋ, ಹಾಗೂ ಶ್ರೀ ಜೆ. ಆರ್. ತನೇಜಾ ಅವರುಗಳನ್ನೂ, ಹುಲ್ಲಿನ ಬೆಳವಣಿಗೆಯ ವಿವಿಧ ಹಂತಗಳ ತಟ್ಟೆಗಳನ್ನೂ ಪ್ರೋವೇಟ್ ಯಂತ್ರದ ಬದಿಯಲ್ಲಿ ಯಂತ್ರದ ರೂಪಶಿಲ್ಪಿ ಡಾ॥ ಜಾನ್ ರಿಚರ್ಡ್ ಬ್ರಾಡಿ ಅವರನ್ನೂ ಕಾಣಬಹುದು.)

## ಧರ್ಮ ಪ್ರಚಾರ ಪರಿಷತ್

ತಿ. ತಿ. ದೇ. ಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆಯನ್ನು ರದ್ದುಗೊಳಿಸಿ 1–7–87 ರಿಂದ ಧರ್ಮ ಪ್ರಚಾರ ಪರಿಷತ್ ಸಂಸ್ಥೆಯನ್ನು ತಿ. ತಿ. ದೇ. ಬೋರ್ಡ್ ನಿರ್ಣಯದಂತೆ ಸ್ಥಾಪನೆಗೊಳಿಸಲಾಗಿದೆ.

ತಿ. ತಿ. ದೇ. ಗಳ ವಿದ್ಯಾ ಇಲಾಖೆಯವರು ನಡೆಸುತ್ತಿದ್ದ ವೇದಪಾಠಶಾಲೆಯನ್ನು ಧರ್ಮ ಪ್ರಚಾರ ಪರಿಷತ್‌ನಲ್ಲಿ ವಿಲೀನಗೊಳಿಸಿ, ವೇದ ಶಿಕ್ಷಣದ ಜೊತೆಗೆ ಅರ್ಚಕತ್ವ, ಪೌರೋಹಿತ್ಯ ಶಿಕ್ಷಣ ವಿಭಾಗಗಳನ್ನೂ ಆರಂಭಿಸಲಾಗುವುದು. ಕಲ್ಯಾಣಿ ಜಲಾಶಯದ ಬಳಿ ಆಶ್ರಮಗಳ ನಿರ್ಮಾಣವಾದ ನಂತರ ತಿ. ತಿ. ದೇ. ಪರಿಪಾಲನಾ ಭವನದಲ್ಲಿ ಈಗ ಕಾರ್ಯ ನಿರ್ವಹಿಸುತ್ತಿರುವ ಧರ್ಮ ಪ್ರಚಾರ ಪರಿಷತ್ ಕಾರ್ಯಾಲಯವನ್ನು ಅಲ್ಲಿಗೆ ವರ್ಗಾಯಿಸಲಾಗುವುದು.

## ಮಾರಿಷಸ್‌ನಲ್ಲಿ ಶ್ರೀ ವೆಂಕಟೇಶ್ವರ ದೇವಾಲಯ

ಮಾರಿಷಸ್‌ನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ನಿರ್ಮಾಣ ಆಗಲಿದ್ದು ಮಾರಿಷಸ್‌ನ ಉಪಪ್ರಧಾನಿ ಹಾಗೂ ಅರ್ಥ ಸಚಿವರಾದ ಶ್ರೀ ಲಕ್ಷ್ಮೀನಾರಾಯುಡು ಅವರು ಈ ದೇವಾಲಯ ನಿರ್ಮಾಣದಲ್ಲಿ ತಿ. ತಿ. ದೇವಸ್ಥಾನಗಳ ನೆರವನ್ನು ಅಪೇಕ್ಷಿಸಿದ್ದಾರೆ.

ಜೂನ್ ತಿಂಗಳ 18 ರಂದು ತಿರುಮಲೆಗೆ ಸತೀಸಹಿತರಾಗಿ ಆಗಮಿಸಿ ಸ್ವಾಮಿಯನ್ನು ಆರಾಧಿಸಿದ ಮಾರಿಷಸ್ ಉಪಪ್ರಧಾನಿಯನ್ನು ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವಿಶ್ವನಾಥಂ ಅವರು ಸ್ವಾಗತಿಸಿದರು.

ನಂತರ ಅಧಿಕಾರಿಗಳೊಡನೆ ಮಾತನಾಡುತ್ತ ಮಾರಿಷಸ್‌ನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ನಿರ್ಮಾಣದ ಬಗ್ಗೆ ಮಾತನಾಡುತ್ತ ಈ ದೇವಾಲಯಕ್ಕೆ ವಿಗ್ರಹಗಳನ್ನು ಒದಗಿಸಬೇಕೆಂದು ತಿ. ತಿ. ದೇ. ಗಳನ್ನು ಅವರು ಕೋರಿದರೆಂದು ವರದಿಯಾಗಿದೆ.

## ಸ್ವಾಮಿಗೆ ೫ ಲಕ್ಷ ರೂಗಳ ಕಾಣಿಕೆ

ಜೂನ್ ತಿಂಗಳ ಕೊನೆಯ ಭಾನುವಾರದಂದು ಹುಂಡಿಯ ಕಾಣಿಕೆಗಳನ್ನು ಎಣಿಸುತ್ತಿದ್ದಾಗ 5 ಲಕ್ಷ ರೂಗಳ ನೋಟಿನ ಕಟ್ಟುಗಳನ್ನು ಕಂಡುಕೊಳ್ಳಲಾಯಿತು. ಎರಡೂವರೆ ಲಕ್ಷ ರೂಗಳ ಎರಡು ಕಟ್ಟುಗಳನ್ನು ಒಟ್ಟಿಗೆ ಸೇರಿಸಿದ ಈ ಕಾಣಿಕೆಯನ್ನು ಅಜ್ಞಾತಭಕ್ತರೊಬ್ಬರು ಶ್ರೀ ವೆಂಕಟೇಶ್ವರ ಸ್ವಾಮಿಗೆ ಸಮರ್ಪಿಸಿದ್ದರು. ಅಷ್ಟು ದೊಡ್ಡ ಮೊತ್ತದ ಒಂದು ಕಾಣಿಕೆ ಇದೇ ಪ್ರಥಮವೆಂದು ಹೇಳಲಾಗಿದ್ದು, ಅಂದು ಹುಂಡಿಯ ಮೂಲಕ ಸ್ವಾಮಿಗೆ ಒಟ್ಟು 10 ಲಕ್ಷ 65 ಸಾವಿರ ರೂಗಳು ಸಂದಾಯವಾಗಿದ್ದಿತು.

## ತಿರುಮಲೆಯಲ್ಲಿ ಮತ್ತೊಂದು ಕರ್ನಾಟಕ ವಸತಿಗೃಹ

ತಿರುಮಲೆ ಬೆಟ್ಟದ ಮೇಲೆ ಭಕ್ತರ ಸೌಕರ್ಯಗಳಿಗಾಗಿ ಮತ್ತೊಂದು ವಸತಿಗೃಹವನ್ನು ನಿರ್ಮಿಸಲು ಕರ್ನಾಟಕ ಸರ್ಕಾರ ಒಂದು ಯೋಜನೆಯನ್ನು ತಯಾರಿಸಿದೆ.

ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖಾಮಂತ್ರಿ ಶ್ರೀ ಕೆ. ಅಮರನಾಥ ಶೆಟ್ಟಿ ಅವರು ಪತ್ರಕರ್ತರೊಂದಿಗೆ ಮಾತನಾಡುತ್ತ ತಿರುಮಲೆಯಲ್ಲಿ ಈಗಾಗಲೇ ೬0 ಕೊಠಡಿಗಳ ಒಂದು ಕರ್ನಾಟಕ ವಸತಿಗೃಹವಿದೆಯೆಂದೂ, ಇಂತಹವೇ ವಸತಿಗೃಹಗಳು ಶ್ರೀಶೈಲ, ಮಂತ್ರಾಲಯಗಳಲ್ಲೂ ಇವೆಯೆಂದೂ, ತಿರುಮಲೆಯಲ್ಲಿ ಕರ್ನಾಟಕದಿಂದ ಆಗಮಿಸುವ ಯಾತ್ರಿಕರಿಗೆ ಅನುಕೂಲವಾಗಲೆಂದು ಇನ್ನೊಂದು ವಸತಿಗೃಹವನ್ನು ನಿರ್ಮಿಸಲಾಗುವುದೆಂದೂ ಆದಕ್ಕಾಗಿ 7 ಎಕರೆ ಸ್ಥಳವನ್ನೂ ಸಂಗ್ರಹಿಸಲಾಗಿದೆಯೆಂದೂ ನುಡಿದರು.

ಮುಂದಿನ ಸಂಚಿಕೆಯಲ್ಲಿ .... .... ...

## ಸಪ್ತಗಿರಿ. — ಸೆಪ್ಟಂಬರ್ 1987

**ಇತಿಹಾಸದಲ್ಲಿ ಧರ್ಮಾಚಾರ್ಯರು. ವೆಂಕಟನಾಥರ ಗ್ರಂಥಬಾಹುಳ್ಯ**

– ಸಿ. ಗೋವಿಂದಾಚಾರ್ – ಡಿ. ಕೃಷ್ಣೈಯಂಗಾರ್

**ಶ್ರೀವಚನ ಭೂಷಣಂ** **ಅನಂತಪುರದ ಅನಂತಪದ್ಮನಾಭ**

– ಬಿ. ಎಸ್. ವಾಣಿ – ಶಂಕರ್ ಸಾರಥ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಸೆಪ್ಟಂಬರ್ 1987

| | | |
|---|---|---|
| 5. | ಶನಿವಾರ | ವಾಮನ ಜಯಂತಿ |
| 6. | ಭಾನುವಾರ | ಅನಂತ ಪದ್ಮನಾಭವ್ರತಂ |
| 17. | ಗುರುವಾರ | ಕನ್ಯಾಸಂಕ್ರಮಣ |
| 22. | ಮಂಗಳವಾರ | ಮಹಾಲಯ ಅಮಾವಾಸ್ಯೆ |
| 25. | ಶುಕ್ರವಾರ | ಶ್ರೀವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ |
| 29. | ಮಂಗಳವಾರ | ಸರಸ್ವತೀ ಪೂಜೆ |
| | ,, | ಶ್ರೀ ವೆಂಕಟೇಶ್ವರ ಸ್ವಾಮಿ ಗರುಡೋತ್ಸವ |

## ಉಡುಪಿಯ ಕೃಷ್ಣನಿಗೆ ಚಿನ್ನದ ತೇರು

ಉಡುಪಿಯಲ್ಲಿ ಶ್ರೀ ಮಧ್ವಾಚಾರ್ಯ ಪ್ರತಿಷ್ಠಿತ ಕಡೆಗೋಲು ಕೃಷ್ಣನಿಗೆ ಉತ್ಸವಕ್ಕಾಗಿ ಜುಲೈ 5 ರಂದು 85 ಲಕ್ಷ ರೂಗಳ ವೆಚ್ಚದ ಸುವರ್ಣ ರಥವನ್ನು ಸಮರ್ಪಿಸಲಾಯಿತು.

ಉಡುಪಿಯಲ್ಲಿನ ಸಧ್ಯದ ಪರ್ಯಾಯ ಪೀಠದ ಫಲಿಮಾರು ಮಠಾಧೀಶ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಸ್ವಾಮಿಜೀ ಅವರು ಸಹಸ್ರಾರು ಮಂದಿ ಭಕ್ತರ ಸಮಕ್ಷಮದಲ್ಲಿ ಶ್ರೀಕೃಷ್ಣನಿಗೆ ಮೂರು ಮೀಟರ್ ಎತ್ತರದ ಈ ಸುವರ್ಣರಥವನ್ನು ಅರ್ಪಿಸಿದರು. ಸಮರ್ಪಣೆಯ ನಂತರ ರಥಬೀದಿಯಲ್ಲಿ ಭವ್ಯವಾದ ಮೆರವಣಿಗೆಯಲ್ಲಿ, ಭಜನೆ, ಗಾಯನ, ವೇದಮಂತ್ರ ಪಠನೆ, ಮಂಗಳ ವಾದ್ಯಗಳೊಂದಿಗೆ ಚಿನ್ನದ ರಥವನ್ನು ನಡೆಸಲಾಯಿತು.

ತೇಗದ ಮರದಿಂದ ಮಾಡಿದ ಈ ರಥಕ್ಕೆ 25 ಕಿಲೋಗ್ರಾಂ ತೂಕದ ಚಿನ್ನದ ತಗಡುಗಳನ್ನು ಹೊಸಲಾಗಿದೆ. ಈ ರಥವನ್ನು ತಮಿಳುನಾಡಿನ ಕರಕುಶಲ ಸಂಸ್ಥೆ (ಪೂಂಪುಹಾರ್)ಯ ನಲವತ್ತು ಮಂದಿ ಕಲಾವಿದರು ಒಂದು ವರ್ಷಕಾಲದ ಪರಿಶ್ರಮದಿಂದ ತಯಾರಿಸಿದ್ದಾರೆ.

ಹಲವು ಮಠಾಧಿಪತಿಗಳು ಒಟ್ಟಿಗೆ ಸೇರಿದ ಈ ಸಮರ್ಪಣಾಸಮಾರಂಭದಲ್ಲಿ, ಫಲಿಮಾರು ಮಠಾಧೀಶರು,ಫಲಿಮಾರು, ಪೇಜಾವರ, ಪುತ್ತಿಗೆ, ಉತ್ತರಾದಿ ಮಠಗಳ ಹಿರಿಯ ಕಿರಿಯ ಸ್ವಾಮಿಗಳೊಂದಿಗೆ ರಥಾರೂಢ ಶ್ರೀಕೃಷ್ಣನಿಗೆ ಮಹಾ ಮಂಗಳಾರತಿ ನಡೆಸಿದರು. ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥಸ್ವಾಮಿಗಳು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಉಡುಪಿಯ ಶ್ರೀಕೃಷ್ಣ ಮಠದ ಸ್ವರ್ಣರಥ ಯೋಜನೆಗೆ ಕರ್ನಾಟಕ ಸರ್ಕಾರ ನೀಡಿದ 5 ಲಕ್ಷ ರೂಗಳ ಕಾಣಿಕೆಯನ್ನು ಕರ್ನಾಟಕ ರಾಜ್ಯದ ಮುಜರಾಯಿ ಇಲಾಖಾಸಚಿವ ಶ್ರೀ ಅಮರನಾಥ ಶೆಟ್ಟಿಯವರು ಫಲಿಮಾರು ಮಠದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರಿಗೆ ನೀಡಿದರು, ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು 1 ಲಕ್ಷ ರೂಗಳನ್ನು ನೀಡಿದರು. (ಹೆಚ್ಚಿನ ವಿವರಗಳಿಗಾಗಿ ಒಳಪುಟಗಳಲ್ಲಿನ ಲೇಖನವನ್ನೂ ಗಮನಿಸಿ.)



Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

